


# ಮಹಾಮನೆ

ಕನ್ನಡ ಮಾಸಿಕ ಪತ್ರಿಕೆ



ಸಂಪುಟ : ೨೩
ಸಂಚಿಕೆ : ೦೩
ಅಕ್ಟೋಬರ್ : ೨೦೨೦
ರೂ. ೧೫/-



ಕಲ್ಬುರ್ಗಿ ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು: "ವಚನ ದಿನ" ಕಾರ್ಯಕ್ರಮ, ದಿನಾಂಕ: ೨೯.೦೮.೨೦೨೦ ವೇದಿಕೆಯಲ್ಲಿ: ಡಾ. ಶರಣಬಸಪ್ಪ ವಡ್ಡನಕೇರಿ, ಡಾ. ಪ್ರೇಮಾ ಅಪಚಂದ್, ಕುಪೇಂದ್ರ ಪಾಟೀಲ್, ಇಂಜಿನಿಯರ್ ನಿಜಗುಣಿ, ಕಾವ್ಯಶ್ರೀ ಮಹಗಾಂವಕರ್




ಬೆಂಗಳೂರು- ಗಾಂಧಿನಗರ ಘಟಕ ಶರಣ ಸಾಹಿತ್ಯ ಪರಿಷತ್ತು: "ವಚನ ದಿನ" ಕಾರ್ಯಕ್ರಮ ಹಾಗೂ ಬೆಂಗಳೂರು ನಗರ ಜಿಲ್ಲಾ ೪ನೇ ಶರಣ ಸಾಹಿತ್ಯ ಸಮ್ಮೇಳನ-೨೦೧೫ ದತ್ತಿ ಉಪನ್ಯಾಸ ಕಾರ್ಯಕ್ರಮ, ದಿನಾಂಕ: ೨೯.೦೮.೨೦೨೦
ವೇದಿಕೆಯಲ್ಲಿ: ಮಂಜುಳಾ ಶಿವಾನಂದ, ಡಾ. ಎಂ.ಎಸ್. ಆಶಾದೇವಿ, ಡಾ. ಲೀಲಾದೇವಿ ಆರ್. ಪ್ರಸಾದ್ ಇತರರು



ಬಸವ ಕಲ್ಯಾಣ ತಾಲೂಕು ಶರಣ ಸಾಹಿತ್ಯ ಪರಿಷತ್ತು: "ವಚನ ದಿನ" ಕಾರ್ಯಕ್ರಮ ಹಾಗೂ ಲಿಂ. ಶ್ರೀಮತಿ ಕಾಶಮ್ಮ ಮತ್ತು ರಾಮಲಿಂಗಯ್ಯ ಸ್ವಾಮಿ ದತ್ತಿ ಉಪನ್ಯಾಸ ಕಾರ್ಯಕ್ರಮ, ದಿನಾಂಕ: ೨೯.೦೮.೨೦೨೦
ವೇದಿಕೆಯಲ್ಲಿ: ಮೀನಾಕುಮಾರಿ ನೌಬಾದೆ, ಶಂಕರಣ್ಣ ಕೊಳಕೂರ, ವಿಶ್ವನಾಥ್ ಮುಕ್ತ, ಅಂಬಿಕಾ ನಾಗರಾಳೆ, ಗುರುನಾಥ ಗಡ್ಡೆ



# ಮಹಾಮನೆ

ಅಕ್ಟೋಬರ್ ೨೦೨೦ | ಸಂಪುಟ : ೨೩ | ಸಂಚಿಕೆ : ೦೩



*ಪ್ರಕಾಶಕರು*
ಡಾ. ಗೊ.ರು. ಚನ್ನಬಸಪ್ಪ
ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು
ಮೈಸೂರು

**ಆಡಳಿತ ಕಾರ್ಯಾಲಯ**
ಜಗದ್ಗುರು ಶ್ರೀ ಶಿವರಾತ್ರೀಶ್ವರ ವೃತ್ತ
೧ನೆಯ ಮುಖ್ಯರಸ್ತೆ,
ಜಯನಗರ ೮ನೆಯ ವಿಭಾಗ,
ಬೆಂಗಳೂರು - ೫೬೦ ೦೭೦
ದೂ: ೦೮೦ - ೨೨೯೭ ೦೧೨೫
**E-mail:**
mahamanemagazine@gmail.com

ಸಂಚಿಕೆಯ ಅಂತರಂಗ

ಚಿನ್ನಹ

# ಆತ್ಮಸಾಕ್ಷಿ ಎನ್ನುವ ಇಬ್ಬಾಯ ಖಡ್ಗದ ದಾರಿಯಲ್ಲಿ

ಜಾಗತಿಕ ಮಟ್ಟದಲ್ಲಿ ಕೂಡ ಶರಣ ಕ್ರಾಂತಿಯ ಅನನ್ಯತೆಯನ್ನು ಕುರಿತು ಅನೇಕ ಚರ್ಚೆಗಳು ನಡೆಯುತ್ತಲೇ ಬಂದಿವೆ. ಇದರ ಅಸಾಧಾರಣ ಶಕ್ತಿಯ ಮೂಲ ಯಾವುದಿರಬಹುದು? ಎನ್ನುವುದನ್ನು ಮತ್ತೆ ಮತ್ತೆ ಶೋಧಿಸಲಾಗುತ್ತಲೇ ಇದೆ. ಅದಕ್ಕಿರುವ ಅನೇಕ ಉತ್ತರಗಳಲ್ಲಿ ಬಹಳ ಮುಖ್ಯವಾದುದೆಂದರೆ ಆತ್ಮಸಾಕ್ಷಿಗೆ ಇವರು ಕೊಟ್ಟ ಮೊದಲ ಸ್ಥಾನ. ಏನೆಂಥ ಸನ್ನಿವೇಶಗಳಲ್ಲಿಯೂ ಆತ್ಮಸಾಕ್ಷಿಗೆ ವಿರುದ್ಧವಾಗಿ ನಡೆಯಬಾರದು ಎನ್ನುವ ಕಷ್ಟದ ದಾರಿಯನ್ನು ಶರಣರು ಆರಿಸಿಕೊಂಡರು. ಶರಣ ಚಳುವಳಿಯು ಎದುರಿಸಿದ ಸವಾಲುಗಳು ಹಿನ್ನೆಡೆಗಳು, ಸೋಲುಗಳು ಈ ಎಲ್ಲವನ್ನೂ ಮುಕ್ತವಾಗಿ ಎಲ್ಲರೊಂದಿಗೆ ಸ್ವಗತದ ನೆಲೆಯಲ್ಲಿಯೇ ಆಗಲಿ ಹಂಚಿಕೊಳ್ಳಲು ಇವರಿಗೆ ಸಾಧ್ಯವಾದದ್ದು ಈ ಕಾರಣದಿಂದ. ಇದನ್ನು ಹೀಗೆ ಹಂಚಿಕೊಳ್ಳುವ ಮನಸ್ಥಿತಿಯೊಂದು ಅವರಿಗೆ ಇದ್ದದ್ದರ ಹಿಂದೆ ಮನುಷ್ಯ ಮೂಲತಃ ಶಕ್ತಿ ಮತ್ತು ದೌರ್ಬಲ್ಯಗಳ ಒಕ್ಕೂಟ ಎನ್ನುವ ಅರಿವು ಅವರಿಗಿದ್ದದ್ದರಿಂದ ಎನ್ನುವುದು ನಿಜ. ಆದರೆ ನಮ್ಮ ಶಕ್ತಿಗಳನ್ನು ಹೇಳಿಕೊಳ್ಳುವುದರಲ್ಲಿ ನಮಗಿರುವ ಉತ್ಸಾಹ ನಮ್ಮನ್ನು ವಸ್ತುನಿಷ್ಠ ಪರೀಕ್ಷೆಗೆ ಒಡ್ಡಿಕೊಳ್ಳುವುದರಲ್ಲಿ ಇರುವುದಿಲ್ಲ ಎನ್ನುವುದೂ ಕೂಡ ಮನುಷ್ಯ ದೌರ್ಬಲ್ಯಗಳಲ್ಲಿ ಒಂದು. ವಚನಕಾರರಿಗೆ ದೌರ್ಬಲ್ಯಗಳನ್ನು ದೌರ್ಬಲ್ಯಗಳೆಂದು ಗುರುತಿಸುವುದು ಸಾಧ್ಯವಾಯಿತು. ಮತ್ತು ಹೀಗೆ ಗುರುತಿಸಲಾದ ದೌರ್ಬಲ್ಯಗಳನ್ನು ಅವರು ಸಮಷ್ಟಿ ನೆಲೆಗೆ ಆರೋಪಿಸದೆ, ವ್ಯಕ್ತಿಗತ ನೆಲೆಯಲ್ಲಿ ಉಳಿಸಿಕೊಳ್ಳುವಲ್ಲಿ ತೋರಿಸಿದ ಎಚ್ಚರ ಮತ್ತು ವಿವೇಕ ಬಹುದೊಡ್ಡದೆಂದೇ ತೋರುತ್ತದೆ. ಇತರರನ್ನು ಉದ್ದೇಶಿಸಿ ನೋಡಿ, ಇವು ನಿಮ್ಮ ದೌರ್ಬಲ್ಯಗಳು ಎಂದು ಹೇಳುವಾಗ ಹುಟ್ಟುವ ಅಹಂಕಾರ ಮತ್ತು ಆತ್ಮವಂಚನೆ ಈ ಎರಡು ಅಪಾಯಗಳಿಂದಲೂ ಅವರು ಪಾರಾದರು. ಇದು ಅವರಿಗೆ ಸಾಧ್ಯವಾದದ್ದು ತಮ್ಮನ್ನೇ ಆತ್ಮಪರೀಕ್ಷೆಗೆ ಒಡ್ಡಿಕೊಂಡಿದ್ದರಿಂದ. ಸ್ವಶೋಧವನ್ನೇ ಅವರು ಕೇಂದ್ರವಾಗಿಸಿಕೊಂಡರು. "ಎನಗಿಂತ ಕಿರಿಯರಿಲ್ಲ" ಎಂದು ಬಸವಣ್ಣ ಹೇಳುವಾಗ ನಮ್ಮ ಅನುಭವಕ್ಕೆ ಬರುವ ಬಸವಣ್ಣನ ವಿನಯ ಮನುಷ್ಯರಿಗೆ ಸಹಜವಾದುದಲ್ಲ. ಅದು ಅಪಾರ ಶ್ರಮ, ಶ್ರದ್ಧೆ ಮತ್ತು ಏಕಾಗ್ರತೆಯನ್ನು ಬೇಡುತ್ತದೆ. ಮಾತ್ರವಲ್ಲ ವಸ್ತುನಿಷ್ಠ ಶೋಧಕ್ಕೆ ನಮ್ಮನ್ನು ನಾವು ಒಡ್ಡಿಕೊಳ್ಳಲು ಪ್ರಾಮಾಣಿಕತೆಯೂ ಬೇಕು. ಒಬ್ಬ ಸಾರ್ವಜನಿಕ ವ್ಯಕ್ತಿ "ಎನಗಿಂತ ಕಿರಿಯರಿಲ್ಲ" ಎಂದು ಹೇಳಿದರೆ, ಇಂದಿನ ಕಾಲಘಟ್ಟದಲ್ಲಿ ನಮಗೆ ಅದು ಅಹಂಕಾರದ ಇನ್ನೊಂದು ರೂಪವಾಗಿಯೇ ಕಾಣಿಸುತ್ತದೆ. ಎಂದರೆ ಅವರು ತಮ್ಮೊಳಗೆ ಇಲ್ಲದ ವಿನಯದಲ್ಲಿ ಎನಗಿಂತ ಕಿರಿಯರಿಲ್ಲ ಎನ್ನಬೇಕು, ಎದುರಿಗಿರುವವರು ನಿಮಗಿಂತ ಹಿರಿಯರಿಲ್ಲ ಎಂದು ಹಾಡಿ ಹೊಗಳಬೇಕು ಎನ್ನುವುದೇ ಅವರ ಮಾತಿನ ಇಂಗಿತವೂ, ಸೂಚನೆಯೂ ಆಗಿರುತ್ತದೆ. ಎಂದರೆ, ಇದು ಶುದ್ಧಾಂಗವಾಗಿ ಆತ್ಮವಂಚನೆಯ ಮಾತು. ಆಡುತ್ತಿರುವ ಮಾತಿಗೆ ತದ್ವಿರುದ್ಧವಾದ ಅರ್ಥವನ್ನು ಆ ಮಾತುಗಳೂ ಮತ್ತು ಆ ವ್ಯಕ್ತಿ ಉದ್ದೇಶಿಸಿವೆ. ಈ ಆತ್ಮವಂಚನೆಯ ಪ್ರಕ್ರಿಯೆಯಲ್ಲಿ ವ್ಯಕ್ತಿ ಮತ್ತು ಸಮಷ್ಟಿ ಇಬ್ಬರೂ ಪಾಲ್ಗೊಂಡಿದ್ದಾರೆ. ಹಾಗಿದ್ದರೆ ಇಡೀ ಸಮುದಾಯವೇ ಆತ್ಮವಂಚನೆಯ ಸಮುದಾಯ ಎಂದಾಯಿತು.

ಈ ನಮ್ಮ ಕಾಲಘಟ್ಟವು ಇಂಥ ಆತ್ಮವಂಚನೆಯನ್ನು ಮನುಷ್ಯನ ಸಹಜ ದೌರ್ಬಲ್ಯ ಎಂದು ಎಗ್ಗಿಲ್ಲದೆ, ಒಪ್ಪಿಬಿಟ್ಟಿದೆ. ಆದ್ದರಿಂದಲೇ ನಮಗೆ ಆತ್ಮಸಾಕ್ಷಿಯನ್ನು ಎದುರಿಗಿಟ್ಟುಕೊಳ್ಳುವುದು ಬಲು ಕಷ್ಟದ ಸಂಗತಿ. ಆತ್ಮವಂಚನೆಯು ದೌರ್ಬಲ್ಯವೆಂದು ಒಪ್ಪುವ ಹುಸಿತನದಲ್ಲಿಯೇ ಅದನ್ನೇ ಬದುಕಿನ ದಾರಿಯಾಗಿಸಿಕೊಳ್ಳುವ ಅಪಾಯದ ಘಟ್ಟವನ್ನು ನಾವು ತಲುಪಿಬಿಟ್ಟಿದ್ದೇವೆ. ಈ ಸಂಗತಿಯನ್ನು ನಾವು ನಮ್ಮ ಜನನಾಯಕರಿಗೆ ವಿಸ್ತರಿಸಿಕೊಂಡರೆ, ಏನಾಗುತ್ತದೆ? ಜನನಾಯಕರ ಆತ್ಮವಂಚನೆ ಮತ್ತು ಲೋಕವಂಚನೆಯನ್ನು ನಾವು ಮನುಷ್ಯರ ದೌರ್ಬಲ್ಯ ಎಂದೂ ಒಪ್ಪುತ್ತೇವೆ, ವಾಸ್ತವ ಎಂದೂ ಗೊಣಗೊಣಗುತ್ತಲೇ ಒಪ್ಪುತ್ತೇವೆ. ಇದು ಸಾಲದೆಂಬಂತೆ ನಾವು ಈ ಇಡೀ ಬೆಳವಣಿಗೆಯ ಸಕ್ರಿಯ ಪಾಲುದಾರರೂ ಆಗಿಬಿಟ್ಟಿದ್ದೇವೆ. ಈ ಎಲ್ಲದರಿಂದ ನಾಯಕರು ಪ್ರಜೆಗಳ ಮೇಲಾಗಲಿ, ಪ್ರಜೆಗಳು ನಾಯಕರ ಮೇಲಾಗಲಿ ಅಥವಾ ಪ್ರಜೆಗಳು ನಾಯಕರನ್ನಾಗಲೀ, ನಾಯಕರು ಪ್ರಜೆಗಳನ್ನಾಗಲೀ ಪ್ರಶ್ನಿಸುವ ಹಕ್ಕು ಮತ್ತು ಅವಕಾಶ ಎರಡನ್ನೂ ಕಳೆದುಕೊಂಡುಬಿಟ್ಟಿದ್ದೇವೆ.

ಇಂತಹ ವಿಷಮ ಸನ್ನಿವೇಶಗಳ ಎದುರಿಗೆ ಬಸವಣ್ಣನ "ಎನ್ನ ಚಿತ್ತವು ಹತ್ತಿಯ ಹಣ್ಣು ನೋಡಯ್ಯಾ, ವಿಚಾರಿಸಿದೊಡೇನು ಹುರುಳಿಲ್ಲವಯ್ಯಾ" ಎನ್ನುವ ಮಾತು ನಮ್ಮಲ್ಲಿ ಅದೆಷ್ಟು ಆಘಾತವನ್ನು ಸೃಷ್ಟಿಸುತ್ತದೆ! ಬಸವಣ್ಣನ ಈ ವಚನವು ಆತ್ಮಸಾಕ್ಷಿಯ ದಾರಿಯೆಂದರೆ ಅನುದಿನವೂ, ಅನುಗಾಲವೂ ಮನುಷ್ಯ ಚೇತನವು ತನ್ನನ್ನು ಎಚ್ಚರವಾಗಿಟ್ಟುಕೊಳ್ಳಬೇಕಾದ ಕಡುಕಷ್ಟವನ್ನು ಹೇಳುತ್ತದೆ. ನಿದ್ದೆ ಎಚ್ಚರಗಳಲ್ಲಿಯೂ ಮೈಮರೆಯದ ಮನೋಎಚ್ಚರ ಮಾತ್ರ ಆತ್ಮಸಾಕ್ಷಿಯನ್ನು ಜೀವಂತವಾಗಿರಿಸುತ್ತದೆ. ಇಲ್ಲವಾದಲ್ಲಿ ಯಾವುದೋ ಘಳಿಗೆಯಲ್ಲಿ ನಾವು ಆತ್ಮಸಾಕ್ಷಿಯಿಂದ ಆತ್ಮವಂಚನೆಗೆ ಗೊತ್ತಿಲ್ಲದಂತೆ ಜಾರಿಬಿಡುತ್ತೇವೆ. ಜಾರಿದ ಅರಿವೂ ಇಲ್ಲದೆ, ನಾವು ಆತ್ಮಸಾಕ್ಷಿಯ ದಾರಿಯಲ್ಲೇ ಇದ್ದೇವೆ ಎನ್ನುವ ಠೇಂಕಾರದಲ್ಲೇ ಮುಂದುವರಿಯುತ್ತೇವೆ.

ಬಸವಣ್ಣ ತನ್ನನ್ನು ತಾನು ಸಾರ್ವಜನಿಕ ವ್ಯಕ್ತಿ ಎಂದು ಗುರುತಿಸಿಕೊಂಡವರು. ಆದ್ದರಿಂದಲೇ ವ್ಯಕ್ತಿಗತವಾದ ಲೋಭ ಮತ್ತು ಆಮಿಷಗಳು ತನ್ನಲ್ಲಿ ಒಂದು ಘಳಿಗೆಯ ಮಟ್ಟಿಗೂ ಇರಬಾರದೆಂದು ಪ್ರತಿಘಳಿಗೆಯೂ ಪ್ರಯತ್ನಿಸಿದವರು. ಮಡದಿ, ಮಕ್ಕಳಿಗೆಂದು ಕುದಿದೆನಾದರೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ ಎಂದು ಹೇಳುವಾಗ ತಾನು ಸ್ವಾರ್ಥವನ್ನು ಮೀರಿಕೊಳ್ಳಬೇಕಾದ್ದು ಸಾರ್ವಜನಿಕ ವ್ಯಕ್ತಿಯಾಗಿ ತನ್ನ ವ್ಯಕ್ತಿತ್ವವನ್ನು ತಾನು ಮರುಹುಟ್ಟಿನಲ್ಲಿ ಕಟ್ಟಿಕೊಳ್ಳಬೇಕಾದ ನೋವು ಮತ್ತು ಕಷ್ಟದ ದಾರಿಯೆನ್ನುವ ಅರಿವು ವ್ಯಕ್ತವಾಗುತ್ತಿದೆ. ಇದು ಕೇವಲ ಭಕ್ತನಾಗಲು ಹಂಬಲಿಸಿ, ಭವವನ್ನು ಮೀರಿಕೊಳ್ಳುವ ಹುಡುಕಾಟ ಮತ್ತು ಹೋರಾಟವಲ್ಲ. ಸಾರ್ವಜನಿಕ ವ್ಯಕ್ತಿಯಾಗಿ ತಾನು ಉಳಿಸಿಕೊಳ್ಳಬೇಕಾದ ಮನೋಸಾಕ್ಷಿಯ ದಾರಿಯೂಹೌದು.

ಈ ಸಂಚಿಕೆಯಲ್ಲಿ ಕನ್ನಡದ ಹಲವು ಲೇಖಕರು ಶರಣ ಚಳವಳಿ ಮತ್ತು ಪರಂಪರೆಯ ಬಗ್ಗೆ ಲೇಖನಗಳನ್ನು ನೀಡಿದ್ದಾರೆ. ಪ್ರೇಮಕ್ಕ ಹೊರಟ್ಟಿ, ಡಾ. ಬಿ. ನಂಜುಂಡಸ್ವಾಮಿ, ಬಿದರಹಳ್ಳಿ ನರಸಿಂಹಮೂರ್ತಿ, ಪ್ರೊ. ಓ.ಎಲ್. ನಾಗಭೂಷಣಸ್ವಾಮಿ, ಪ್ರೊ. ಅಮರೇಶ ನುಗಡೋಣಿ, ಮಹಾದೇವ ಹೊರಟ್ಟಿ, ಶಿವಕುಮಾರ ಎಸ್. ಬಳಿಗಾರ, ಡಾ. ಎಸ್. ಪ್ರಸಾದಸ್ವಾಮಿ, ಡಾ. ಗೀತಾ ಎನ್., ಡಾ॥ ಬ್ರ.ಕು. ಬಸವರಾಜ ರಾಜಋಷಿ, ಶಿವಗಂಗಾ ರುಮ್ಮಾ, ಗೊ.ರು. ಚನ್ನಬಸಪ್ಪ, ಶ್ರೀಮತಿ ಸುಮಂಗಲಾ ಎಸ್. ಮುಮ್ಮಿಗಟ್ಟಿ, ಪ್ರೊ. ಎಸ್.ಜಿ. ಸಿದ್ಧರಾಮಯ್ಯ ಅವರು ತಮ್ಮ ವಿಚಾರಗಳನ್ನು ಓದುಗರೊಂದಿಗೆ ಹಂಚಿಕೊಂಡಿದ್ದಾರೆ. ಇವರೆಲ್ಲರಿಗೆ ಹಾಗೂ ಎಂದಿನಂತೆ ಪೂರ್ಣ ಸಹಕಾರವನ್ನು ನೀಡಿರುವ ಕಾರ್ಯಾಲಯದ ಸಿಬ್ಬಂದಿಯವರಿಗೆ ಮತ್ತು ಮುಖಪುಟವನ್ನು ರೂಪಿಸಿಕೊಟ್ಟ ಶ್ರೀ ಮುರಳೀಧರ ವಿ. ರಾಠೋಡ ಅವರಿಗೆ ಸಂಪಾದಕ ಮಂಡಳಿಯ ಪರವಾಗಿ ಹೃತ್ಪೂರ್ವಕ ಕೃತಜ್ಞತೆಗಳು.

**ಡಾ. ಎಂ.ಎಸ್. ಆಶಾದೇವಿ**

ಸಂಪಾದಕರು

# ಅಧ್ಯಕ್ಷರ ನುಡಿ

ಕನ್ನಡ ಸಾಹಿತ್ಯದಲ್ಲಿ ವಚನ ಸಾಹಿತ್ಯಕ್ಕೆ ಒಂದು ವಿಶಿಷ್ಟ ಸ್ಥಾನವಿದೆ. ವಚನ ಸಾಹಿತ್ಯ, ಕನ್ನಡ ಸಾಹಿತ್ಯದ ಬೇರು, ಹೃದಯ ಎಂದರೆ ತಪ್ಪಾಗಲಾರದು. ೧೨ನೆಯ ಶತಮಾನದವರೆಗೆ ಸಾಹಿತ್ಯ ಪಂಡಿತರ ಸೊತ್ತಾಗಿತ್ತು. ರಾಜಾಶ್ರಯದಲ್ಲಿ ಬೆಳೆದ ಸಾಹಿತಿಗಳು ರಾಜ-ಮಹಾರಾಜರ ಹೊಗಳಿಕೆ, ವೈಭವೀಕರಣಕ್ಕಾಗಿ ಸಾಹಿತ್ಯ ರಚನೆ ಮಾಡಿದರು. ಇದೇ ಸಂದರ್ಭದಲ್ಲಿ ಅರಮನೆಗಳಿಂದ ಹೊರಬಂದು, ರಾಜಾಶ್ರಯದಿಂದ ದೂರವಾಗಿ, ಪಂಡಿತರ ಕಪಿಮುಷ್ಠಿಯಿಂದ ಪಾರಾಗಿ ಬಂದ ಕನ್ನಡ ಸಾಹಿತ್ಯ ೧೨ನೆಯ ಶತಮಾನದಲ್ಲಿ ಜನರ ಸಾಹಿತ್ಯವಾಯಿತು. ಜನರಾಡುವ ಸರಳ ಕನ್ನಡ ಭಾಷೆಯಲ್ಲಿ ಸಾಹಿತ್ಯ ರಚನೆ ಮಾಡುವುದರ ಮೂಲಕ ವಚನಕಾರರು ಜನರ ಧ್ವನಿಯಾದರು. ಪಂಡಿತರು ಮಾತ್ರ ಸಾಹಿತ್ಯ ರಚಿಸಬಲ್ಲರು ಎಂಬ ಪ್ರಚಲಿತ ನಂಬಿಕೆಗೆ ವಿರೋಧವಾಗಿ ಜನಸಾಮಾನ್ಯರು, ದಲಿತರು, ವಿವಿಧ ಕಸಬುಗಳನ್ನು ಮಾಡುತ್ತಿದ್ದ ಕೆಳಹಂತದ ಕಾಯಕ ಜೀವಿಗಳು ವಚನಗಳನ್ನು ರಚಿಸುವುದರ ಮೂಲಕ ಕನ್ನಡ ಸಾಹಿತ್ಯದ ಹಿರಿಮೆಯನ್ನು ಹೆಚ್ಚಿಸಿದರು. ದೇವಭಾಷೆ, ಜನಭಾಷೆಯಾಗದಿದ್ದಾಗ ಜನಭಾಷೆಯನ್ನು ದೇವಭಾಷೆಯನ್ನಾಗಿಸಿದ ಕೀರ್ತಿ ವಚನಕಾರರಿಗೆ ಸಲ್ಲುತ್ತದೆ.

ಜನಸಾಮಾನ್ಯರಿಂದ ರಚಿತವಾದ ವಚನ ಸಾಹಿತ್ಯ ಸಹಜವಾಗಿಯೇ ಸಾಮಾನ್ಯ ಜನತೆಯ ನೋವು-ನಲಿವುಗಳಿಗೆ ಸ್ಪಂದಿಸಿತು; ದುಡಿವ ಜನರಿಗೆ ದನಿಯಾಯಿತು. ಸಮಾಜದಲ್ಲಿದ್ದ ಲೋಪದೋಷಗಳನ್ನು, ಅಸಮಾನತೆಯನ್ನು, ಭೇದ-ಭಾವಗಳನ್ನು ತೊಡೆದು ಹಾಕುವ ಸಂಜೀವನಿಯಾಯಿತು. ವಚನ ಸಾಹಿತ್ಯದಿಂದಾಗಿ ಕನ್ನಡ ಸಾಹಿತ್ಯ ಜನಪರ ಸಾಹಿತ್ಯವಾಯಿತು. ಸಾಮಾನ್ಯ ಜನತೆ ಮೊದಲ ಬಾರಿಗೆ ತಮ್ಮನ್ನು ಸಾಹಿತ್ಯ ರಚನೆಯಲ್ಲಿ ತೊಡಗಿಸಿಕೊಂಡದ್ದು, ಸಾರ್ವಜನಿಕ ಮೌಲ್ಯದ ಸಾಹಿತ್ಯವನ್ನು ಕೊಟ್ಟದ್ದು, ಜಗತ್ತೇ ಗಮನಿಸಬೇಕಾದ ಅಂಶವಾಗಿದೆ.

ಅತ್ಯಂತ ಸಮೃದ್ಧವಾಗಿ ಬೆಳೆದು, ವಿಜೃಂಭಿಸಿ, ಒಂದು ಸಮಗ್ರ ಕ್ರಾಂತಿಯನ್ನು ಹುಟ್ಟುಹಾಕಲು ಕಾರಣೀಭೂತವಾದ ವಚನ ಸಾಹಿತ್ಯ ಕನ್ನಡ ಸಾಹಿತ್ಯದಲ್ಲಿ ಅಪರೂಪದ ಸಾಹಿತ್ಯವೆಂದೇ ಹೇಳಬಹುದು.

ಇಂಥ ಸಾಹಿತ್ಯವನ್ನು ಮುಗಿಸಲು ವ್ಯವಸ್ಥಿತ ಸಂಚು ನಡೆಯಿತು. ಆದರೆ ಶರಣರ ಬದ್ಧತೆಯಿಂದಾಗಿ, ತಮ್ಮ ಪ್ರಾಣದ ಹಂಗು ತೊರೆದು, ಕಲ್ಯಾಣದಿಂದ ತಮಗೆ ಸಿಕ್ಕ ವಚನ ಕಟ್ಟುಗಳೊಂದಿಗೆ, ಗುಂಪು-ಗುಂಪಾಗಿ ತಮಗೆ ತೋರಿದ ಕಡೆಗೆ ಹೊರಟುಹೋದರು. ದಾರಿಯಲ್ಲಿ ಸಿಕ್ಕ ಹಳ್ಳಿಗಳಲ್ಲಿ, ಮನೆ-ಮಠಗಳಲ್ಲಿ ವಚನದ ಕಟ್ಟುಗಳನ್ನು ಇಡುತ್ತ-ಕೊಡುತ್ತ ಹೋದರು. ವಚನ ಸಾಹಿತ್ಯದ ಬೆಳಕು ಕಾಲದ ಗರ್ಭದಲ್ಲಿ ನಿಸ್ತೇಜವಾಯ್ತು.

ಇದೀಗ ನಾವು ೨೧ನೆಯ ಶತಮಾನದಲ್ಲಿದ್ದೇವೆ. ಈ ಶತಮಾನ ಪ್ರಾರಂಭವಾಗಿ



ಎರಡು ದಶಕಗಳೇ ಸಂದಿವೆ. ಶರಣರು ನೀಡಿದ ಅನೇಕ ಸಂದೇಶಗಳು, ಸಂವಿಧಾನದಲ್ಲಿ ಮೂಡಿಬಂದಿವೆ. ಅನೇಕ ವಿಚಾರಗಳು ಕಾನೂನು ಸ್ವರೂಪ ಪಡೆದಿವೆ. ಆದಾಗ್ಯೂ ಜಾತೀಯತೆ ಈಗ ಎಲ್ಲ ಕ್ಷೇತ್ರಗಳನ್ನು ಪ್ರವೇಶಿಸಿ, ಬಾಯಿಯಲ್ಲಿ ಜಾತ್ಯಾತೀತತೆ, ಕೃತಿಯಲ್ಲಿ ಜಾತಿ-ಉಪಜಾತಿಗಳ ಜಪಮಾಲೆ, ಹೆಣ್ಣಿಗೆ ಸಮಾನತೆ ಅಧಿಕಾರ ನೀಡಿದರೂ, ವಾಸ್ತವವಾಗಿ ಅದರ ಅವಹೇಳನವಾಗುತ್ತಿದೆ. ತೋರಿಕೆಗೆ ಮಾತ್ರ ಸಮಾನತೆ. ಹೆಣ್ಣಿನ ಮೇಲೆ ನಡೆಯುವ ದೌರ್ಜನ್ಯ, ಭ್ರೂಣಹತ್ಯೆ, ವರದಕ್ಷಿಣೆ ಹತ್ಯೆಗಳು ರಾಜಾರೋಷವಾಗಿ ನಡೆಯುತ್ತಿವೆ. ಸ್ವಜನಪಕ್ಷಪಾತ ಮತ್ತು ಭ್ರಷ್ಟಾಚಾರ, ಅನಾಚಾರಗಳು ನಿತ್ಯ ಜೀವನದ ಭಾಗವಾಗಿವೆ. ಸ್ವಾರ್ಥ, ಮೋಸ, ವಂಚನೆಗಳು ಸರ್ವವ್ಯಾಪಿಯಾಗಿ ಮಾನವೀಯತೆ ಮತ್ತು ಮಾನವ ಸಂಬಂಧಗಳನ್ನೇ ನುಂಗಿ ನೀರು ಕುಡಿಯುತ್ತಿವೆ.

ಅವನತಿಯ ಅಂಚಿಗೆ ಬಂದು ನಿಂತಿರುವ ಜನಜೀವನವನ್ನು ಮೇಲೆತ್ತಬೇಕಾದರೆ ನಾವು ವಚನ ಸಾಹಿತ್ಯದತ್ತ ಹೊರಳಿ ನೋಡಬೇಕಾಗಿದೆ. ವಚನ ಸಾಹಿತ್ಯ ವ್ಯಾಪಕವಾಗಿ ಪ್ರಸಾರವಾಗುತ್ತಿದ್ದರೂ, ಅದನ್ನು ಅನುಷ್ಠಾನಗೊಳಿಸುವ ಕಡೆಗೆ ಇನ್ನೂ ನಾವೆಲ್ಲರೂ ಗಮನಹರಿಸಬೇಕಾಗಿದೆ. ಆಧುನಿಕ ಯುಗದ ನಾಗಾಲೋಟದಲ್ಲಿ ನಮ್ಮನ್ನು ಮುತ್ತಿರುವ ವಿಕಾರಗಳಿಗೆ ನಾವು ಔಷಧವನ್ನು ಹುಡುಕಬೇಕಾಗಿದೆ. ಈ ಎಲ್ಲ ಕರೋನಾಕ್ಕಿಂತ ಭಯಂಕರವಾದ ರೋಗಗಳಿಗೆ ವಚನ ಸಾಹಿತ್ಯ, ಶಿವಶರಣರ ಜೀವನ ಶೈಲಿ ಮತ್ತು ಕಾಯಕ ಜೀವಿಗಳ ಚಳುವಳಿ ನಮಗೆ ದಿವ್ಯ ಔಷಧವನ್ನು ಒದಗಿಸಬಲ್ಲವಾಗಿವೆ.

**– ಅಪ್ಪಾರಾವ ಅಕ್ಕೋಣೆ**

ಶರಣ ಚಳುವಳಿಯ ಮೂಲ ಆಶಯವೇ ಪರ್ಯಾಯ ಸಂಸ್ಕೃತಿಯ ನಿರ್ಮಾಣ. ಚಾತುರ್ವರ್ಣ ಪದ್ಧತಿಯು ಜಾತಿಗಳನ್ನು ಹುಟ್ಟುಹಾಕಿ ಸಮಾಜದಲ್ಲಿ ಅಸಮಾನತೆ, ಅಮಾನವೀಯತೆಗಳನ್ನು ಬದುಕಾಗಿರಿಸಿರುವುದರ ವಿರುದ್ಧದ ಹೋರಾಟವೇ ಇದರ ಗುರಿ. ಚಾತುರ್ವರ್ಣ ವ್ಯವಸ್ಥೆಯನ್ನು ಗಟ್ಟಿಗೊಳಿಸಲು ಪೂರಕ ಸಾಮಗ್ರಿಯಾಗಿ ಬಳಕೆಯಾಗುವ ಎಲ್ಲ ಪಠ್ಯಗಳನ್ನೂ ತಿರಸ್ಕರಿಸುತ್ತ ಕಟುವಾಗಿ ಅವುಗಳ ಬಗ್ಗೆ ಟೀಕೆಯ ಮಾತುಗಳನ್ನಾಡಿರುವುದು ಬಹುತೇಕ ವಚನಕಾರರಲ್ಲಿ ಕಂಡುಬರುತ್ತವೆ.

**– ಪ್ರೊ. ಎಸ್.ಜಿ. ಸಿದ್ಧರಾಮಯ್ಯ**

# ವಚನಗಳಲ್ಲಿ ಕಾಯದ ಮಹತಿ

**ಪ್ರೇಮಕ್ಕ ಹೊರಟ್ಟಿ**

ವಿಶ್ವದ ಅನುಭಾವ ಸಾಹಿತ್ಯದಲ್ಲಿ ವಚನಸಾಹಿತ್ಯಕ್ಕೆ ತನ್ನದೇ ಆದ ವಿಶಿಷ್ಟ ಸ್ಥಾನವಿದೆ. ಇಲ್ಲಿರುವುದು ಸಾರ್ವಕಾಲಿಕ ಸತ್ಯ, ಶ್ರದ್ಧಜ್ಞಾನ, ಆತ್ಮಾನುಭವದ ಸಾಗರ. ವಚನ ಸಾಹಿತ್ಯವನ್ನು ಕನ್ನಡದ ಉಪನಿಷತ್‌ಗಳೆಂದು, ವಚನಕಾರರನ್ನು ಋಷಿಗಳು, ದರ್ಶನಕಾರರೆಂದು ದಿ. ಎಂ. ಆರ್. ಶ್ರೀನಿವಾಸಮೂರ್ತಿಯವರು ಹೇಳಿದ್ದಾರೆ. ಸಾಮಾನ್ಯ ಭಾಷೆಯಲ್ಲಿ ವಚನ ಎಂದರೆ 'ಭಾಷೆ ಕೊಡುವುದು, ನುಡಿದಂತೆ ನಡೆಯುವುದು' ಎಂದರ್ಥವಾಗುತ್ತದೆ. ವಚನಕಾರರು ಸಂಪ್ರದಾಯಕ್ಕಿಂತ ಅನುಭವ ಜ್ಞಾನಕ್ಕೆ ಹೆಚ್ಚು ಮಹತ್ವಕೊಟ್ಟರು. ಅವರಿಗೆ ಮಾತೆಂಬುದು ಜ್ಯೋತಿರ್ಲಿಂಗ, ಆದ್ದರಿಂದ ವಚನಧರ್ಮವು ದೇಶ, ಕಾಲ, ಜಾತಿ, ಪಂಥ ಇವ್ಯಾವುಗಳ ವ್ಯತ್ಯಾಸವಿಲ್ಲದೆ ಸರ್ವರಿಗೂ ಸಮಾನವಾಗಿ ಅನ್ವಯಿಸುವ ವಿಶ್ವಧರ್ಮವಾಗುವ ಅರ್ಹತೆ ಪಡೆದುಕೊಂಡಿದೆ.

ಶರಣರು ತಮ್ಮ ಸತ್ಯಶುದ್ಧ ಕಾಯಕದಿಂದ ನುಡಿದಂತೆ ನಡೆದು, ದಾಸೋಹ ಮಾಡಿ, ಸ್ತ್ರೀ ಸ್ವಾತಂತ್ರ್ಯ, ಜಾತಿ ನಿರ್ಮೂಲನೆ, ಏಕದೇವೋಪಾಸನೆ ಪರವಾಗಿಯೂ ಅದೇ ಸಮಯದಲ್ಲಿ ಅಂಧವಿಶ್ವಾಸ, ಮೂಢನಂಬಿಕೆಗಳನ್ನು ಬಲವಾಗಿ ಖಂಡಿಸಿದರು. ಭವಿ-ಭಕ್ತ ಎಂಬ ಎರಡೇ ಜಾತಿ ಇರುವುದು. ನೂರೆಂಟು ಜಾತಿಗಳಿಲ್ಲ. ದೇವನೊಬ್ಬ ನಾಮ ಹಲವು, ದೇವಲೋಕ ಮರ್ತ್ಯಲೋಕ ಎಂಬ ಎರಡು ಲೋಗಳಿಲ್ಲ, ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರು, ಎಲ್ಲರೂ ಸಮಾನರು ಎಂದು, ಮಾನವೀಯತೆಯೇ ಮುಖ್ಯವಾಗಿ ದಯವೇ ಧರ್ಮದ ಮೂಲವೆಂದು ಸಾರಿ, ಇವ ನಮ್ಮವ, ಇವ ನಮ್ಮವ ಎಂಬ ತತ್ವದ ಆಧಾರದ ಮೇಲೆ ಸಮಾಜ ಕಟ್ಟಿದರು.

ವಚನಗಳು ಸಂಪೂರ್ಣ ಜ್ಞಾನವನ್ನು ಕೊಡುವ ಕಾಮಧೇನು, ಕಲ್ಪವೃಕ್ಷವೇ ಆಗಿವೆ. ಯಾವುದನ್ನು ಅರಿತರೆ ಎಲ್ಲವನ್ನು ಅರಿಯಬಹುದೋ ಆ ನಿತ್ಯ ಅವ್ಯಕ್ತ, ನಿರಾಕಾರ, ನಿರ್ಗುಣ, ಇಂದ್ರಿಯಾತೀತ, ಸರ್ವವ್ಯಾಪಿ ತತ್ವವನ್ನು ಅಂದರೆ ಪರಮಾತ್ಮನ ಸಾಕ್ಷಾತ್ಕಾರಕ್ಕೆ ಅಂತರಂಗ ಬಹಿರಂಗ ಶುದ್ಧಿ ಅವಶ್ಯವೆಂಬುದನ್ನು ಇಷ್ಟಲಿಂಗದ ಮೂಲಕ ಲಿಂಗೋಪಾಸನೆ ಮಾಡಿ, ಲಿಂಗಾಂಗ ಸಾಮರಸ್ಯವನ್ನು ಸಾಧಿಸಬೇಕು. ಈ ಸಾಧನೆಗೆ ಮೂಲ ಈ ಮಾನವ ದೇಹ. ಅದಕ್ಕಾಗಿ ಶರಣರು ದೇಹಕ್ಕೆ ಬಹುಮುಖ್ಯವಾದ ಪ್ರಾಧಾನ್ಯತೆಯನ್ನು ಕೊಟ್ಟರು. ಈ ದೇಹ, ಪ್ರಕೃತಿಯ ವಿಶಿಷ್ಟ ದೇಣಿಗೆ, ಇದನ್ನರಿತು ಸಾಧನೆ ಮಾಡಿದಾಗ ಆತ್ಮ ಸಾಕ್ಷಾತ್ಕಾರ ಸಾಧ್ಯ ಎಂದು ತೋರಿಸಿಕೊಟ್ಟರು.

ಇದಕ್ಕಾಗಿ ದೇಹ ದಂಡಿಸಬೇಕಾಗಿಲ್ಲ. ಉಪವಾಸ, ವ್ರತ, ಕಠಿಣ ಆಚರಣೆಗಳು ಬೇಕಿಲ್ಲ. ಸನ್ಯಾಸ ಸ್ವೀಕರಿಸಬೇಕಾಗಿಲ್ಲ. ಮನುಷ್ಯ ದೇಹವನ್ನು ಧರಿಸಿ ಹುಟ್ಟಿದುದಕ್ಕೆ ದುಃಖಪಡಬೇಕಾಗಿಲ್ಲ.



ಐಹಿಕ ಸುಖವನ್ನು ಪಾರಮಾರ್ಥದ ಆನಂದವನ್ನು ದೊರಕಿಸಿಕೊಳ್ಳುವವನೇ ಜಾಣ. ಅದಕ್ಕೆ ಷಟ್‌ಸ್ಥಲ ಜ್ಞಾನಿ ಚೆನ್ನಬಸವಣ್ಣ ಹೀಗೆ ನುಡಿಯುತ್ತಾರೆ.

**ಕಾಯದಿಂದ ಲಿಂಗದರ್ಶನ**
**ಕಾಯದಿಂದ ಜಂಗಮದರ್ಶನ**
**ಕಾಯದಿಂದ ಪ್ರಸಾದ ಸಂಪತ್ತು**
**ಕೂಡಲಸಂಗಯ್ಯ ಈ ಕಾಯದಿಂದ**
**ನಿಮ್ಮವ ಕಂಡೆನಯ್ಯ**

ಎಂದು ಕಾಯದ ಮಹತ್ವವನ್ನು ತಿಳಿಸುತ್ತಾರೆ.

ಮನುಷ್ಯರಿಗೆ ಮಾನವ ಶರೀರವೇ ಅದ್ಭುತವಾದ ಸಂಪತ್ತು. ಪಶುಪಕ್ಷಿ ಪ್ರಾಣಿಗಳನ್ನು ನೋಡಿದಾಗ, ಮಾನವರಾದ ನಮಗೆ ಬೆಲೆ ಕಟ್ಟಲಾರದಂತಹ ಈ ದೇಹವನ್ನು ನೋಡಿದಾಗ, ನಾವೆಷ್ಟು ಅದೃಷ್ಟವಂತರು ಎಂದು ಅನಿಸದೇ ಇರಲಾರದು. ಇಂಥ ಪವಿತ್ರವಾದ ದುರ್ಲಭವಾದ ಅದ್ಭುತ ಸಂಪತ್ತನ್ನು ಸಕಲ ಮಾನವರಿಗೆ ಪ್ರಕೃತಿ ಸಮಾನವಾಗಿ ನೀಡಿದೆ.

ಒಂದಲ್ಲ, ಎರಡಲ್ಲ, ಮೂರಲ್ಲ, ನಾಲ್ಕಲ್ಲ, ಎಂಬತ್ತು ನಾಲ್ಕು ಲಕ್ಷ ಯೋನಿಯೊಳಗೆ ಬಂದೆ, ಬಂದೆ.... ಎಂಬ ಅಕ್ಕನ ಉದ್ಗಾರದಂತೆ ೮೪ ಲಕ್ಷ ಜೀವರಾಶಿಯಲ್ಲಿ ಸುತ್ತಿ ಬರುವ ಆತ್ಮನಿಗೆ ಕೊನೆಯ ಜನ್ಮವಾಗಿ ಮಾನವ ದೇಹದ ಆಶ್ರಯ ಸಿಗುತ್ತದೆ. ಮಾನವನು ದೇವನಾಗುವ ಸಾಧ್ಯತೆ ಮತ್ತು ಅವಕಾಶ ಈ ಜನ್ಮದಲ್ಲಿ ಇದೆ. ಎಲ್ಲಾ ಲೌಕಿಕ ಮತ್ತು ಪಾರಮಾರ್ಥಿಕ ಸಾಧನೆಗೆ ಶರೀರವೇ ಮೂಲಸಾಧನ.

ವಚನಕಾರರು ದೇಹವನ್ನು ತಿರಸ್ಕರಿಸಿದವರಲ್ಲ. ದೇಹವಿಲ್ಲದೆ ಯಾವ ಸಿದ್ಧಿಸಾಧನೆಯನ್ನು ಸಾಧಿಸಲು ಆಗದು ಎಂಬ ಸತ್ಯ ಅವರಿಗೆ ತಿಳಿದಿದೆ. ಅದಕ್ಕೆ ಮಾನವ ಜನ್ಮಕ್ಕೆ ಸಲ್ಲಬೇಕಾದ ಗೌರವವನ್ನು ಶರಣರು ನೀಡಿದ್ದಾರೆ. ಹಾಗೆಯೇ ತಮ್ಮ ಸಾಧನೆಗೆ ಅಡ್ಡಬರುವ ಮದ, ಮಾತ್ಸರ್ಯ, ಕ್ರೋಧ, ಲೋಭ, ಮೋಹ ಇತ್ಯಾದಿ ಅರಿಷಡ್ವರ್ಗಗಳನ್ನು ಗೆಲ್ಲಲು ಪ್ರಯತ್ನಿಸಿದ್ದಾರೆ.

ಆದ್ಯ ವಚನಕಾರ ಜೇಡರ ದಾಸಿಮಯ್ಯ ಹೇಳುತ್ತಾರೆ-

**ಒಡಲುಗೊಂಡವ ಹಸಿವ**
**ಒಡಲುಗೊಂಡವ ಹುಸಿವ**
**ಒಡಲುಗೊಂಡವನೆಂದು ನೀನೆನ್ನ**
**ಜಡಿದೊಮ್ಮೆ ನುಡಿಯದಿರಾ!**
**ನೀನೆನ್ನಂತೆ ಒಮ್ಮೆ ಒಡಲುಗೊಂಡು**

ನೋಡಾ ರಾಮನಾಥಾ ಎಂದು ಪರಮಾತ್ಮನಿಗೆ ಸವಾಲು ಹಾಕುತ್ತಾರೆ. ಹಸಿವು, ತೃಷೆ, ಸುಳ್ಳು, ಇತ್ಯಾದಿಗಳು ಹೇಗೆ ಸಾಧಕನಿಗೆ ತೊಂದರೆಯನ್ನುಂಟು ಮಾಡುತ್ತವೆ ಎಂಬುದನ್ನು ಹೇಳಿ, ಇವುಗಳನ್ನು ಅನುಭವಿಸಲು ನೀನೇ ಒಮ್ಮೆ ನನ್ನಂತೆ ಶರೀರ ಧರಿಸಿ ಬಾ ಎಂದು ಆಹ್ವಾನಿಸುತ್ತಾರೆ.

'ಶರೀರ ಮಾಧ್ಯಂ ಖಲು ಧರ್ಮ ಸಾಧನಂ' ಎಂಬ ಉಕ್ತಿಯಂತೆ ಈ ಶರೀರದಲ್ಲಿದ್ದಾಗ ಮೂರು ಅವಸ್ಥೆಗಳು ಜಾಗ್ರತ, ಸ್ವಪ್ನ, ಸುಷುಪ್ತಿ, ಆರು ಚಕ್ರಗಳು, ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ಆಜ್ಞಾ, ಸಹಸ್ರಾರ; ಲಿಂಗಾಂಗ ಸಾಮರಸ್ಯದಿಂದ ಶಿವಯೋಗ ಸಾಧಿಸಲು ಯೋಗಿಕ ಮಾರ್ಗದಿಂದ ಪ್ರಾಣವನ್ನು ಜಾಗ್ರತಗೊಳಿಸಿ, ಊರ್ಧ್ವಮುಖಿಯಾಗಿ

ಮೇಲಕ್ಕೇರಿಸಿ, ಬ್ರಹ್ಮರಂಧ್ರದ ಮೂಲಕ ಸಹಸ್ರಾರಕ್ಕೆ ಏರುವುದರ ಅನುಭವ ಪಡೆಯುವುದು ಈ ದೇಹದಲ್ಲಿಯೇ. ಸತ್‌ಚಿತ್ ಆನಂದ ಸ್ವರೂಪನಾದ, ಆ ಮಹಾಘನ ಆತ್ಮವಸ್ತುವನ್ನು, ಶಾಶ್ವತ ಚೈತನ್ಯವನ್ನು ಅರಿಯುವುದು, ಅರಿತು ತಾನೇ ಆಗುವುದು ಈ ದೇಹದ ಮೂಲಕವಾಗಿಯೇ. ಪಂಚಕೋಶಗಳನ್ನು ಅರಿಯಲು (ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ) ಸಾಧನ ಈ ದೇಹ. ಅನ್ನಮಯವಾದ ಈ ದೇಹಕ್ಕೆ ಅನ್ನದಿಂದಲೇ ಬೆಳವಣಿಗೆ ಮತ್ತು ಇಲ್ಲಿಯೇ ಅಂತ್ಯ ಕಾಣುತ್ತದೆ, ವ್ಯಕ್ತವಾದ, ಪಂಚಭೂತಾತ್ಮಕ ಈ ದೇಹವು ಜೀವಾತ್ಮನಿಗೆ ಸಾಧನೆ ಮಾಡಲು ಪ್ರಧಾನವಾದ, ಪರಮೋಚ್ಚವಾದ ಅಂಗವಾದ್ದರಿಂದ ಶರಣರು ದೇಹವನ್ನು ಅತ್ಯಂತ ಗೌರವದಿಂದ ಕಾಣುತ್ತಾರೆ. ಇದಕ್ಕಾಗಿಯೇ ಶ್ರೀಮನ್ ನಿಜಗುಣಶಿವಯೋಗಿಗಳು "ನರಜನ್ಮದಿಂದಹದೊಳು ಮಿಗಿಲುಂಟೆ" ಎಂದು ಉದ್ಗರಿಸಿದ್ದಾರೆ. ದೇವಾನು ದೇವತೆಗಳು, ಗಂಧರ್ವರು ಕೂಡ ಮುಕ್ತರಾಗಬೇಕಾದರೆ ಮಾನವ ಶರೀರ ಧರಿಸಲೇಬೇಕು.

**ಒಲ್ಲೆನೆಂಬುದು ವೈರಾಗ್ಯ; ಒಲಿವೆನೆಂಬುದು ಕಾಯಗುಣ**
**ಆವ ಪದಾರ್ಥವಾದರೇನು? ತಾನಿದ್ದೆಡೆಗೆ ಬಂದುದ**
**ಲಿಂಗಾರ್ಪಿತ ಮಾಡಿ ಭೋಗಿಸುವುದೇ ಆಚಾರ**
**ಕೂಡಲಸಂಗಮದೇವನೊಲಿಸಬಂದ**
**ಪ್ರಸಾದಕಾಯವ ಕೆಡಿಸಲಾಗದು**

"ಅಯ್ಯಾ, ಸಂಸಾರವೆಂಬ ಸಾಗರಕ್ಕೆ ಒಡಲೆಂಬುದೊಂದು ಚೈತ್ರ ಕಂಡಯ್ಯಾ" ಎಂಬ ಶಿವಯೋಗಿ ಸಿದ್ಧರಾಮರ ನುಡಿಯಂತೆ ಈ ಸಂಸಾರ ಸಾಗರ ದಾಟಲಿಕ್ಕೆ ಇರುವ ನಾವೆ ಈ ದೇಹ. ಈ ನಾವೆ ರಂಧ್ರವಿಲ್ಲದೆ ಭದ್ರವಾಗಿದ್ದರೆ ಪಾರಾಗುವುದು, ದುರ್ಬಲವಾಗಿದ್ದರೆ ಮುಳುಗಿಹೋಗುವುದು. ಕೂಡಲ ಸಂಗಮನೊಲಿಸಬಂದ ಈ ಪ್ರಸಾದಕಾಯ ಸುಭದ್ರ ನಾವೆಯಾಗುವಂತೆ ಇರಿಸಿಕೊಳ್ಳುವ ಜಾಣತನ ಸಾಧಕನಿಗಿರಬೇಕು, ಅಲ್ಲದೆ ಅದನ್ನು ಕೆಡಿಸಬಾರದು ಎಂದು ಅಣ್ಣ ಬಸವಣ್ಣ ಹೇಳುತ್ತಾರೆ.

**ಉಳ್ಳವರು ಶಿವಾಲಯವ ಮಾಡುವರು**
**ನಾನೇನು ಮಾಡುವೆ, ಬಡವನಯ್ಯಾ**
**ಎನ್ನ ಕಾಲೇ ಕಂಬ, ದೇಹವೇ ದೇಗುಲ**
**ಶಿರವೇ ಹೊನ್ನಕಳಸವಯ್ಯ, ಕೂಡಲಸಂಗಮದೇವ ಕೇಳಯ್ಯ**
**ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ.**

ಶ್ರೀಮಂತರು ದೊಡ್ಡ ದೊಡ್ಡ ದೇವಸ್ಥಾನಗಳನ್ನು ಕಟ್ಟಿಸುತ್ತಾರೆ. ಆದರೆ ನಾನು ಬಡವ, ನ್ನ ಕಾಲುಗಳೇ ಕಂಬಗಳು, ದೇಹವೇ ದೇವಾಲಯ, ಶಿರವೇ (ಅಂದರೆ ಪಂಚೇಂದ್ರಿಯಗಳ ನ್ನೊಳಗೊಂಡ ಈ ತಾಳೋಷ್ಟ ಸಂಪುಟ, ದೇಹದಲ್ಲಿ ಮುಖ್ಯವಾದ ಅಂಗ.) ಚಿನ್ನದ ಕಳಶವಯ್ಯ, ಸ್ಥಾವರಕ್ಕೆ ನಾಶವುಂಟು, ಜಂಗಮಕ್ಕೆ ಚೈತನ್ಯತತ್ವಕ್ಕೆ ನಾಶವಿಲ್ಲ ಎಂದು ಅಣ್ಣನವರು ದೇವಾಲಯ ಮಾಡುವ ಬಗೆಯನ್ನು ತಿಳಿಸುತ್ತಾರೆ.

ಆ ನಿತ್ಯ, ನಿರಂಜನ, ಪರಮಾತ್ಮ, ಶುದ್ಧ ಚೈತನ್ಯ ಈ ದೇಹದಲ್ಲಿ ವಾಸಿಸುತ್ತಿರುವನೆಂಬ ಅರಿವಾದಾಗ, ಅನುಭಾವದಲ್ಲಿ ನಿಂತಾಗ ದೇಹ ದೇವಾಲಯವಾಗುತ್ತದೆ.



**ಕಾಲೇ ಕಂಬಗಳಾದವೆನ್ನ! ದೇಹವೇ ದೇಗುಲವಾಯಿತ್ತಯ್ಯ**
**ಎಲ್ಲ ನಾಲಿಗೆಯೆ ಘಂಟೆ, ಶಿರ ಸುವರ್ಣದ ಕಳಶ ಇದೇನಯ್ಯ?**
**ಸರವೆ ಲಿಂಗಕ್ಕೆ ಸಿಂಹಾಸನವಾಗಿದ್ದಿತ್ತಯ್ಯ, ಗುಹೇಶ್ವರ, ನಿಮ್ಮ**
**ಪ್ರತಿಷ್ಠೆ ಪಲ್ಲಟವಾಗದಂತಿದ್ದೆನಯ್ಯಾ!**

ಅಣ್ಣ ಬಸವಣ್ಣನವರ ಮೇಲಿನ ವಚನದಂತೆಯೇ ಇದೆ, ಈ ಅಲ್ಲಮಪ್ರಭುವಿನ ವಚನ "ದೇಹದೊಳಗೆ ದೇವಾಲಯವಿದ್ದು, ಮತ್ತೆ ಬೇರೆ ದೇವಾಲಯವೇಕೆ? ಎರಡಕ್ಕೆ ಹೇಳಲಿಲ್ಲಯ್ಯಾ ಗುಹೇಶ್ವರಾ, ನೀನು ಕಲ್ಲಾದರೆ ನಾನೇನಪ್ಪೆನಯ್ಯಾ?"

"ದೇಹೋ ದೇವಾಲಯ: ಪ್ರೋಕ್ತ; ಜೀವೋದೇವಸ್ಸನಾತನಃ" ಎಂಬ ಉಪನಿಷತ್ ಉಕ್ತಿಯಂತೆ, ಈ ದೇಹದೊಳಗೆ ದೇವಾಲಯವಿದ್ದು ಇನ್ನೊಂದು ದೇವಾಲಯವಿಲ್ಲ. ಇಲ್ಲಿರುವ ಜೀವನೇ ಪರಮಾತ್ಮ, ಅಲ್ಲದೇ ಗುಹೇಶ್ವರ ನೀನು ಕಲ್ಲಾದರೆ ನಾನೇನು ಮಾಡಲಿ ಎಂದು ಪ್ರಶ್ನಿಸುತ್ತಾರೆ. ಅಲ್ಲಮಪ್ರಭುಗಳು ಈ ವಚನದಲ್ಲಿ:

**ಪ್ರಾಣಲಿಂಗಕ್ಕೆ ಕಾಯವೇ ಸಜ್ಜೆ, ಆಕಾಶಗಂಗೆಯಲ್ಲಿ ಮಜ್ಜನ**
**ಹೂವಿಲ್ಲದ ಪರಿಮಳದ ಪೂಜೆ,**
**ಹೃದಯಕಮಲದಲ್ಲಿ 'ಶಿವಾಶಿವಾ' ಎಂಬ ಶಬ್ದ**
**ಇದು ಅದ್ವೈತ ಕಾಣಾ ಗುಹೇಶ್ವರಾ !**

ಶರೀರಕ್ಕೆ ಪ್ರಾಧಾನ್ಯತೆ ಕೊಟ್ಟು ಹೇಳಿದ ಈ ವಚನದಲ್ಲಿ ಅಲ್ಲಮಪ್ರಭುಗಳು 'ಪ್ರಾಣಲಿಂಗಕ್ಕೆ ಈ ದೇಹವೇ ಆಧಾರ, ಅಂದರೆ ಇಷ್ಟಲಿಂಗಕ್ಕೆ ಕರಡಿಗೆ ಇದ್ದ ಹಾಗೆ, ಆಕಾಶಗಂಗೆ ಎಂದರೆ ಭ್ರೂಮಧ್ಯೆಯಿಂದ, ಸಹಸ್ರಾರದಿಂದ ಸುಷುಮ್ನೆಯ ಮೂಲಕ ಒಸರುವ ರಸದಿಂದ ಸ್ನಾನ, ಪರಿಮಳದಿಂದ ಕೂಡಿದ ವಾಯುವಿನಿಂದ ಪೂಜೆ, ಹೃದಯ ಸ್ಥಾನದಲ್ಲಿ 'ಶಿವ ಶಿವ' ಎಂಬ ತಾನೇತಾನಾಗಿ ನಡೆಯುತ್ತಿರುವ ಮಂತ್ರ; ಈ ಪೂಜೆಯೇ, ಈ ಎಲ್ಲಾ ಕ್ರಿಯೆಯೇ ಅದ್ವೈತದ ಅನುಭಾವ" ಎಂದು ಹೇಳುತ್ತಿದ್ದಾರೆ.

**ದೇವಲೋಕ ಮರ್ತ್ಯಲೋಕ ವೆಂಬುದು ಬೇರೆ ಮತ್ತುಂಟೆ?**
**ಈ ಲೋಕದೊಳಗೆ ಮತ್ತೆ ಅನಂತಲೋಕ**
**ಶಿವಲೋಕ ಶಿವಾಚಾರವಯ್ಯಾ ಭಕ್ತನಿರ್ದ ಠಾವೇ ದೇವಲೋಕ**
**ಭಕ್ತನಂಗಳವೇ ವಾರಣಾಸಿ, ಕಾಯವೇ ಕೈಲಾಸ**
**ಇದು ಸತ್ಯ, ಕೂಡಲಸಂಗಮದೇವಾ**

ಈ ಲೋಕದಲ್ಲಿ ಸದಾಚಾರಿಗಳಿರುವ ಸ್ಥಾನವೇ ಪವಿತ್ರಕ್ಷೇತ್ರ. ಅದೇ ದೇವಲೋಕ. ದೇವಲೋಕ ಬೇರೆ ಇದೆ ಎಂದು ತಿಳಿಯಬಾರದು. ಈ ಭಕ್ತರಿರುವ ಲೋಕವೇ ದೇವಲೋಕ, ಅವರ ಮನೆ ಅಂಗಳವೇ ವಾರಣಾಸಿ. ಸದಾ ಶಿವನನ್ನು ಸ್ಮರಿಸುತ್ತಿರುವ ಈ ಭಕ್ತನ ಕಾಯವೇ ಕೈಲಾಸವಲ್ಲದೆ ಬೇರೆ ಕೈಲಾಸವಿಲ್ಲ. ಇದು ಸತ್ಯ ಕೂಡಲಸಂಗಮದೇವಾ ಎಂದು ಬಸವಣ್ಣನವರು ಹೇಳುತ್ತಾರೆ.

ಕಾಯವೇ ಕೈಲಾಸವಾಗಬೇಕು ಎಂಬುದಕ್ಕೆ ಇಲ್ಲಿ ಒತ್ತು ಕೊಡಲಾಗಿದೆ.

**ಎನ್ನ ಕಾಯವ ದಂಡಿಗೆಯ ಮಾಡಯ್ಯ**
**ಎನ್ನ ಶಿರವ ಸೋರೆಯ ಮಾಡಯ್ಯ**
**ಎನ್ನ ನರವ ತಂತಿಯ ಮಾಡಯ್ಯ**

**ಎನ್ನ ಬೆರಳ ಕಡ್ಡಿಯ ಮಾಡಯ್ಯ, ಬತ್ತೀಸರಾಗವ ಹಾಡಯ್ಯಾ**
**ಉರದಲೊತ್ತಿ ಬಾರಿಸಯ್ಯ ಕೂಡಲಸಂಗಮದೇವ**

ಈ ಶರೀರವನ್ನು ಲಿಂಗಶರೀರವನ್ನಾಗಿ ಮಾರ್ಪಡಿಸಲು ಇದನ್ನು ವೀಣೆಯನ್ನಾಗಿ ಅಥವಾ ತಂಬೂರಿಯನ್ನಾಗಿ ಮಾಡು, ಈ ಶಿರವನ್ನು ಸೋರೆಬುರುಡೆ, ಈ ನರವನ್ನು ವೀಣೆ ನುಡಿಸಲು ಮೀಟುವ ತಂತಿಯನ್ನಾಗಿ, ಇದನ್ನು ನುಡಿಸುವ ಕಡ್ಡಿಯನ್ನಾಗಿ ಈ ಕೈಬೆರಳುಗಳನ್ನು ಮಾಡು. ಇದರಿಂದ (೩೨) ಬತ್ತೀಸರಾಗವ ನುಡಿಸಯ್ಯ. ಈ ದೇಹವನ್ನು ಒಂದು ಉತ್ತಮ ಸಂಗೀತಸಾಧನವನ್ನಾಗಿ ಮಾಡಿ, ಮುಕ್ತಿ ಹೊಂದಿ ಸಾರ್ಥಕಗೊಳ್ಳುವಂತೆ ಮಾಡು ಎಂದು ಬಸವಣ್ಣನವರು ಕೂಡಲಸಂಗಮದೇವನಲ್ಲಿ ಮೊರೆಯಿಡುತ್ತಾರೆ.

**ಕಾಲುಗಳೆಂಬವು ಗಾಲಿ ಕಂಡಯ್ಯ**
**ದೇಹವೆಂಬುದು ತುಂಬಿದ ಬಂಡಿ ಕಂಡಯ್ಯ**
**ಬಂಡಿಯ ಹೊಡೆಯುವರೈವರು ಮಾನಿಸರು,**
**ಒಬ್ಬರಿಗೊಬ್ಬರು ಸಮವಿಲ್ಲಯ್ಯ**
**ಅದರಿಚ್ಛೆಯನರಿದು ಹೊಡೆಯದಿರ್ದಡೆ**
**ಅದರಚ್ಚು ಮುರಿಯಿತ್ತು ಗುಹೇಶ್ವರ**

ದೇಹವನ್ನು ತುಂಬಿದ ಬಂಡಿಗೆ ಹೋಲಿಸಿರುವ ಅಲ್ಲಮಪ್ರಭುಗಳು, ಈ ದೇಹವೆಂಬ ಬಂಡಿಯನ್ನು ನಡೆಸುವವರು ಒಂದಕ್ಕೊಂದು ಸಮ ಇರದ ಪಂಚೇಂದ್ರಿಯಗಳು, ಇದನ್ನು ತಿಳಿದು ಸರಿಯಾಗಿ ನಡೆದು ಪಾರಾಗಬೇಕಲ್ಲದೆ ದೇಹ ವ್ಯರ್ಥವಾಗಿ ಹೋಗಲಿಕ್ಕೆ ಬಿಡಬಾರದು ಎನ್ನುತ್ತಾರೆ.

ದೇಹವನ್ನು ತುಂಬಿದ ಬಂಡಿಗೆ ಹೋಲಿಸಿರುವ ಅಲ್ಲಮಪ್ರಭುಗಳು, ಈ ದೇಹವೆಂಬ ಬಂಡಿಯನ್ನು ನಡೆಸುವವರು ಒಂದಕ್ಕೊಂದು ಸಮ ಇರದ ಪಂಚೇಂದ್ರಿಯಗಳು. ಇದನ್ನು ತಿಳಿದು, ಸರಿಯಾಗಿ ನಡೆದು ಪಾರಾಗಬೇಕಲ್ಲದೆ ದೇಹ ವ್ಯರ್ಥವಾಗಿ ಹೋಗಲಿಕ್ಕೆ ಬಿಡಬಾರದು ಎನ್ನುತ್ತಾರೆ.

ಆತ್ಮನಿಗೆ ಆಶ್ರಯ ನೀಡಿದ ಈ ದೇಹ ಅಕ್ಕ ಉದ್ಗರಿಸಿದಂತೆ ಶಾಶ್ವತವಲ್ಲ, ಬದಲಾಗುವಂಥದ್ದು, ಕೆಡುವಂಥದ್ದು. ಇದನ್ನು ನಂಬಿ ಕೆಡಬೇಡ ಎಂದು ಈ ವಚನದ ಮೂಲಕ ಎಚ್ಚರಿಸುತ್ತಿದ್ದಾಳೆ ಅಕ್ಕ. ಈ ಶರೀರ

**ಅಮೇಧ್ಯದ ಮಡಕೆ, ಮೂತ್ರದ ಕುಡಕೆ**
**ಎಲುವಿನ ತಡಿಕೆ, ಕೀವಿನ ಹಡಿಕೆ**
**ಸುಡಲೀ ದೇಹವ, ಒಡಲವಿಡಿದು ಕೆಡದಿರು**
**ಚನ್ನಮಲ್ಲಿಕಾರ್ಜುನನರಿ ಮರುಳೇ॥**

ಸಾಧಕನಿಗೆ ಸತ್ಯಾನ್ವೇಷಣೆಯ ಪ್ರಾರಂಭಿಕ ಹಂತದಲ್ಲಿ ದೇಹದ ಬಗ್ಗೆ ಹೀಗೆ ತ್ಯಾಜ್ಯಭಾವ ಅವಶ್ಯವಾಗಿದೆ. ಏಕೆಂದರೆ ದೇಹದ ಮೇಲಿನ ಮೋಹ, ಸತ್ಯ ಸಾಧನೆಗೆ ಪ್ರತಿಬಂಧಕವಾಗುವ ಸಾಧ್ಯತೆ ಇದೆ. ಆದ್ದರಿಂದ ಈ ದೇಹ ಮೋಹವನ್ನು, ವ್ಯಾಮೋಹವನ್ನು ಕಳೆಯುವ ಸಲುವಾಗಿ, ಮೋಹವನ್ನು ಬಿಡಿಸುವ ಸಲುವಾಗಿ, ದೇಹಭಾವ ಮೀರಿ ಹೋಗುವ ಸಲುವಾಗಿ ಹೇಳಿರುವ ಅಕ್ಕನ ವಚನವಿದು. ಮುಂದೆ



**ಎನ್ನ ಕಾಯದ ಕತ್ತಲೆಯ ಕಳೆಯಯ್ಯಾ**
**ಎನ್ನ ಕಾಯದ ಮದವ ಮುರಿಯಯ್ಯಾ**
**ಎನ್ನ ಜೀವದ ಜಂಜಡವ ಮಾಣಿಸಯ್ಯ**
**ಎನ್ನ ದೇವ ಚೆನ್ನಮಲ್ಲಿಕಾರ್ಜುನಯ್ಯಾ**
**ಎನಗೆ ಸುತ್ತಿದ ಮಾಯಾಪ್ರಪಂಚವ ಬಿಡಿಸಾ ನಿಮ್ಮ ಧರ್ಮ**
**ಎಂದು ಬೇಡಿಕೊಳ್ಳುತ್ತಾಳೆ.**

ಇಂದ್ರಿಯ ಸುಖವೆಂಬ ಮಾಯೆ ಆತ್ಮವನ್ನು ಮರವೆಯಿಂದ, ಅಜ್ಞಾನದಿಂದ ಮುಚ್ಚಿಹಾಕಿಬಿಡುತ್ತದೆ. ಇಂದ್ರಿಯ ಸುಖ ಶಾಶ್ವತ ಸುಖವಲ್ಲ. ಅಂತೆಯೇ ಸಾಸಿವೆಯಷ್ಟು ಸುಖಕ್ಕೆ ಸಾಗರದಷ್ಟು ದುಃಖ ನೋಡಾ" ಎಂದಿದ್ದಾರೆ. ಅಲ್ಲಮಪ್ರಭುಗಳು. ಆದ್ದರಿಂದ ಈ ಕಾಯದ ಕತ್ತಲೆಯನ್ನು ತೊಲಗಿಸಿ, ಕಾಯವನ್ನೇ ಪ್ರಸಾದಕಾಯವನ್ನಾಗಿ ಮಾಡಿಕೊಂಡು ಭವಿಯಾಗಿ ಬದುಕದೇ ಭೌತಿಕ ಬದುಕನ್ನು ತಿರಸ್ಕರಿಸದೇ ಎಲ್ಲವನ್ನೂ ಪ್ರಸಾದಮಯವಾಗಿ ಸ್ವೀಕರಿಸಿ ಸತ್ಯ ಶುದ್ಧ ಬದುಕನ್ನು ಬಾಳಲಿಕ್ಕೆ ತಿಳಿಸಿಕೊಟ್ಟಿದ್ದಾರೆ ವಚನಕಾರರು. ಅಕ್ಕ ಹೇಳಿರುವಂತೆ ಚನ್ನಮಲ್ಲಿಕಾರ್ಜುನನು ಒಲಿದ ಕಾಯ ಹೇಗಿದ್ದರೇನು? ಬೆಳ್ಳಗಿದ್ದರೇನು, ಕರ‍್ರಗಿದ್ದರೇನು, ಮಿರಮಿರನೆ ಮಿಂಚಿದರೇನು? ಅಂತರಂಗಶುದ್ಧಿಯೇ ಮುಖ್ಯ. ಆ ದೇವನು ಒಲಿಯಲು ಅವನು ಸಾಕ್ಷಾತ್ಕರಿಸಿಕೊಂಡ ಕಾಯ ಶುದ್ಧಕಾಯ. "ತನುಶುದ್ಧ, ಮನಶುದ್ಧ, ಭಾವಶುದ್ಧವಾದವರೆನಗೊಮ್ಮೆ ತೋರಾ, ಏಕೆಂದರೆ ಅವರ ನಡೆಶುದ್ಧಿ, ನುಡಿಯೆಲ್ಲಾ ಶಿವಾಗಮ. ಈ ಕಾಯದ ಕಳವಳವ ಕೆಡಿಸಿ, ನಿಮ್ಮಲ್ಲಿ ಇಂಬುಗೊಳ್ಳಾ" ಎಂಬುದು ಅಕ್ಕನ ಪ್ರಾರ್ಥನೆ.

**ಹಾವಿನ ಹಲ್ಲ ಕಳೆದು ಹಾವನಾಡಿಸಬಲ್ಲಡೆ**
**ಹಾವಿನ ಸಂಗವೇ ಲೇಸು ಕಂಡಯ್ಯಾ**
**ಕಾಯದ ಸಂಗವ ವಿವರಿಸಬಲ್ಲಡೆ, ಕಾಯದ ಸಂಗವೇ ಲೇಸು ಕಂಡಯ್ಯಾ**
**ತಾಯಿ ರಕ್ಕಸಿಯಾದಂತೆ ಕಾಯ ವಿಕಾರವು**
**ಚೆನ್ನಮಲ್ಲಿಕಾರ್ಜುನಾ, ನೀನೊಲಿದವರು ಕಾಯಗೊಂಡಿದ್ದರೆನಬೇಡ**

ಕಾಯವೆಂಬುದು ಸರ್ಪದಂತೆ. ಈ ಕಾಯದ ಕಾಯವಿಕಾರವೆಂಬ ವಿಷದ ಹಲ್ಲುಗಳನ್ನು ಕಳೆದು ನಿರ್ಲಿಪ್ತನಾಗಿ ಕಾಯದೊಳಗಿರಬಲ್ಲರೆ, ಕಾಯದಲ್ಲಿದ್ದು ಮುಕ್ತಿ ಪಡೆಯಬಹುದು. ಆಗ ಈ ಕಾಯ, ಲಿಂಗಕಾಯ ಆಗುವುದರಿಂದ ಕಾಯದ ಸಂಗವೇ ಲೇಸು ಕಂಡಯ್ಯಾ. ಆದರೆ ಕಾಯವಿಕಾರಕ್ಕೆ, ಪಂಚೇಂದ್ರಿಯಗಳ, ಅಧೀನನಾದರೆ ಈ ಜನ್ಮ ವ್ಯರ್ಥ. ಆದ್ದರಿಂದ ನೀನೊಲಿದವರು ಲಿಂಗ ಕಾಯುವಂತರಾಗುವುದರಿಂದ ಅವರನ್ನು ಕಾಯಗೊಂಡವರೆನ್ನಬೇಡ ಎಂದು ಈ ವಚನದಲ್ಲಿ ಮಹಾದೇವಿಯಕ್ಕ ಹೇಳುತ್ತಾರೆ.

**ಮನೆಯೊಳಗೆ ಮನೆಯೊಡೆಯನಿದ್ದಾನೋ ಇಲ್ಲವೋ?**
**ಹೊಸ್ತಿಲಲ್ಲಿ ಹುಲ್ಲು ಹುಟ್ಟಿ ಮನೆಯೊಳಗೆ ರಜ ತುಂಬಿ**
**ಮನೆಯೊಳಗೆ ಮನೆಯೊಡೆಯನಿದ್ದಾನೋ ಇಲ್ಲವೋ?**
**ತನುವಿನೊಳಗೆ ಹುಸಿ ತುಂಬಿ, ಮನದೊಳಗೆ ವಿಷಯ ತುಂಬಿ**
**ಮನೆಯೊಳಗೆ ಮನೆಯೊಡೆಯನಿಲ್ಲಾ! ಕೂಡಲಸಂಗಮದೇವಾ.**

ಇಲ್ಲಿ ಮನೆ ಎಂದರೆ ಈ ಶರೀರ. ಈ ಶರೀರದಲ್ಲಿ ಇದರ ಒಡೆಯನಿದ್ದಾನೋ ಇಲ್ಲವೋ ಎಂಬುದು ಬಸವಣ್ಣನವರ ಪ್ರಶ್ನೆ. ಹೊಸ್ತಿಲಲ್ಲಿ ಹುಲ್ಲು ಹುಟ್ಟಿ, ಮನೆಯ ಮುಂದಿರುವ

ಹುಲ್ಲು, ಕಸ, ಹಾಗೂ ಮನೆಯ ಒಳಗಿರುವ ಕಸ ಈ ಮನದಲ್ಲಿ ಕಾಮ, ಕ್ರೋಧಾದಿ ವಿಷಯಗಳು ತುಂಬಿ ಈ ಮನೆಯಲ್ಲಿ ಒಡೆಯನಿಲ್ಲ. ಈ ಶರೀರವೆಂಬುದು ಶಿವನ ಆವಾಸಸ್ಥಾನ. ಆದ್ದರಿಂದ ಇದನ್ನು ಎಚ್ಚರಿಕೆಯಿಂದ ಕಾಯ್ದು, ಇಲ್ಲಿ ಕೊಳೆ ಕಲ್ಮಶಗಳು ಸೇರದಂತೆ ಜಾಗರೂಕರಾಗಿರಬೇಕು. ತನು, ಮನವೆರಡು ಶುದ್ಧವಾಗಿರಬೇಕು. ಇದು ಶಿವನು ವಾಸಮಾಡುವ ಸ್ಥಳವಾಗಬೇಕು ಎಂದು ಅಣ್ಣ ಬಸವಣ್ಣ ಹೇಳುತ್ತಾರೆ.

**ಅಂತರಂಗದಲ್ಲಿ ಅರಿವಾದಡೇನಯ್ಯಾ**
**ಬಹಿರಂಗದಲ್ಲಿ ಕ್ರಿಯೆಯಿಲ್ಲದನ್ನಕ್ಕ**
**ದೇಹವಿಲ್ಲದಿರ್ದಡೆ ಪ್ರಾಣಕ್ಕಾಶ್ರಯವುಂಟೆ?**
**ಕನ್ನಡಿ ಇಲ್ಲದಿರ್ದಡೆ ತನ್ನ ಮುಖ ಕಾಣಬಹುದೆ?**
**ಸಾಕಾರ ನಿರಾಕಾರ ಏಕೋದೇವ ನಮ್ಮ ಕೂಡಲಚೆನ್ನಸಂಗಮದೇವಾ**

ಮುಖ ನೋಡಿಕೊಳ್ಳಲು ಕನ್ನಡಿ ಸಾಧನವಾದಂತೆ ಪ್ರಾಣಕ್ಕೆ ದೇಹವೇ ಆಶ್ರಯವಾಗಿದೆ. ಅಂತರಂಗದ ಅರಿವಿಗೆ ಬಹಿರಂಗ ಕ್ರಿಯೆ ಆಶ್ರಯವಾದ ಕಾರಣ, ನಿರಾಕಾರದ, ಆತ್ಮಜ್ಞಾನ ಅರಿವು ಸಾಕಾರದ ಬಹಿರಂಗ ಆಚಾರದಲ್ಲಿ ಪ್ರಕಟವಾಗಬೇಕು. ಆದ್ದರಿಂದ ಕ್ರಿಯೆಯೇ ಜ್ಞಾನ, ಜ್ಞಾನವೇ ಕ್ರಿಯೆ. ಜ್ಞಾನವೆಂದರೆ ತಿಳಿಯುವುದು, ಕ್ರಿಯೆಯೆಂದರೆ ಅದರಂತೆ ಆಚರಿಸುವುದು ಎಂದು ಚನ್ನಬಸವಣ್ಣ ಹೇಳುತ್ತಾರೆ.

ಪಂಚಮಹಾಭೂತಗಳಿಂದಾದ ಈ ಶರೀರ ನಶ್ವರವಾದದ್ದು, ಅನಿತ್ಯವಾದದ್ದು. ಆದ್ದರಿಂದ ಒಮ್ಮೆ ಈ ಮಾನವತ್ವವನ್ನು ಅರಿತು, ಸತ್ಯವನ್ನು ತಿಳಿದು ಈ ದೇಹದ ಮೂಲಕವಾಗಿಯೇ ಆತ್ಮಜ್ಞಾನ ಪ್ರಾಪ್ತಿಮಾಡಿಕೊಳ್ಳಬೇಕು ಎಂದರಲ್ಲದೆ, ಶರಣರು ಇದನ್ನು ಅಲ್ಲಗಳೆಯಲಿಲ್ಲ. ಪಂಚಭೂತಾತ್ಮಕವಾದ ಈ ದೇಹ, ೨೫ ತತ್ವಗಳಿಂದಾದದ್ದು. ಇದರಲ್ಲಿ ತನುತ್ರಯಗಳು (ಸ್ಥೂಲ, ಸೂಕ್ಷ್ಮ, ಕಾರಣ) ತ್ರಿಮಲಗಳು (ಅಣವ, ಕಾರ್ಮಿಕ, ಮಾಯಾ) ಪಂಚಕರ್ಮೇಂದ್ರೀಯಗಳು, ಪಂಚಜ್ಞಾನೇಂದ್ರಿಯಗಳು, ಪಂಚಪ್ರಾಣೇಂದ್ರೀಯಗಳು, ಅಂತಃಕರಣಗಳಾದ ಮನ, ಬುದ್ಧಿ, ಚಿತ್ತ, ಅಹಂಕಾರದೊಂದಿಗೆ ಆತ್ಮ ಮಹತ್ ತತ್ವ ಕೂಡಿದೆ. ಇವೆಲ್ಲವನ್ನು ತಿಳಿಯಲು ಸಾಧನ ಈ ದೇಹ. ಆದ್ದರಿಂದ ಶರಣರು ದೇಹವನ್ನು ಅತ್ಯಂತ ಗೌರವದಿಂದ ಕಂಡಿದ್ದಾರೆ. ಕಾಯವು ಪ್ರಸಾದಕಾಯವಾಗಿ, ದೇಹವು ದೇಗುಲವಾಗಿ, ಅಂಗವು ಲಿಂಗವಾಗಿ ಎಲ್ಲವೂ ಲಿಂಗಮಯವಾಗುವುದೇ ಶರಣರ ಮೂಲ ಸಿದ್ಧಾಂತವಾಗಿದೆ.

●

**'ಗುರುಕೃಪಾ', ಹೊಸಯಲ್ಲಾಪುರ ರೋಡ್, ಧಾರವಾಡ - ೫೮೦ ೦೦೧   ೯೪೮೧೪ ೪೮೭೦೩**

**ಅದ್ವೈತವ ನುಡಿದು ಅಬದ್ಧ ಅಂಗಕ್ಕಾಗಿ**
**ಬದ್ಧರ ಬಾಗಿಲಲ್ಲಿ ಹೊದ್ದುಕೊಂಬರಲ್ಲಾ ಎಂದು**
**ಮತ್ತೆ ಅದ್ವೈತಕ್ಕೆ ಕದ್ದೆಹತನವೇ?**
**ಇಂತೀ ಅಬದ್ಧರ ಕಂಡು ಮುನ್ನವೇ ಹೊದ್ದಬೇಡ**
**ಎಂದನಂಬಿಗರ ಚೌಡಯ್ಯ.**



## ಯಂ ಬಸವಲಿಂಗಶಾಸ್ತ್ರೀ ಸಂಪಾದಿತ ಸಿಂಗಿರಾಜ ಪುರಾಣ ವಿಜಯದಲ್ಲಿ "ಬಸವಣ್ಣನವರ ವಚನಗಳು"

**ಡಾ. ಬಿ. ನಂಜುಂಡಸ್ವಾಮಿ**

ಕರ್ನಾಟಕ ರಾಜ್ಯದಲ್ಲಿ ಮೈಸೂರು ನಗರಕ್ಕೆ ವಿಶೇಷವಾದ ಸ್ಥಾನ. ಇಲ್ಲಿ ನಡೆದ ಸಂಸ್ಕೃತಿ ಚಟುವಟಿಕೆ ವಿಶ್ವಮಟ್ಟದ್ದು ಟಿಪ್ಪುಸುಲ್ತಾನ್ ಆಳ್ವಿಕೆ ನಂತರ ಧರ್ಮಪ್ರಭು ಮುಮ್ಮಡಿ ಕೃಷ್ಣರಾಜ ಒಡೆಯರ್ ಆಳ್ವಿಕೆಯಲ್ಲಿ ಕನ್ನಡ-ಸಂಸ್ಕೃತ ಸಾಹಿತ್ಯ ದಷ್ಟಪುಷ್ಟವಾಗಿ ಬೆಳವಣಿಗೆಯನ್ನು ಹೊಂದಿತು. ಈ ನಗರದಲ್ಲಿ ಶಕ್ತಿವಿಶಿಷ್ಟಾದ್ವೈತ ಅಥವಾ ವೀರಶೈವ ಅಥವಾ ಲಿಂಗವಂತ ವಿದ್ವಾಂಸರು ನೆಲೆಸಿ ತಮ್ಮ ಶಕ್ತಿಮೀರಿ ವೀರಶೈವ ಸಾಹಿತ್ಯ ಸೇವೆಯನ್ನು ಸಲ್ಲಿಸಿದ್ದಾರೆ. ೧೮೬೦ ರಿಂದ ೧೯೬೦ರ ಕಾಲಮಾನದ ಮೈಸೂರು ನಗರದ ವೀರಶೈವ ವಿದ್ವಾಂಸರ ಸೇವೆ ಬಗ್ಗೆ ತಲಸ್ಪರ್ಶಿಯಾದ ಅಧ್ಯಯನ ನಡೆದಿಲ್ಲ. ಆ ನಿಟ್ಟಿನಲ್ಲಿ ಯುವ ವಿದ್ವಾಂಸರು ಸೂಕ್ಷ್ಮವಾದ ಅಧ್ಯಯನ ಮಾಡಬೇಕು.

ವ್ಯಾಕರಣದ ಮಲ್ಲಪ್ಪನವರು ಮೈಸೂರು ನಗರದಲ್ಲಿ "ರಾಜಶೇಖರ ವಿಳಾಸವನ್ನು" ಓಲೆಗರಿಯಿಂದ ಪ್ರತಿಮಾಡಿ ಸಂಪಾದಿಸಿ ಪ್ರಕಟ ಮಾಡಿದ್ದ ಕೃತಿಯೇ ದೇಶಿಯ ವಿದ್ವಾಂಸರ ಪ್ರಪ್ರಥಮ ಸಂಪಾದಿತ ಗ್ರಂಥ. ಈ ಗ್ರಂಥ ೧೮೬೨ರ ಕಾಲಮಾನದಲ್ಲಿ ಮುದ್ರಣವಾಗಿದೆ. ಹೀಗೆ ಈ ನಗರದಲ್ಲಿ ಸಾಹಿತ್ಯ ಸೇವೆ ಮಾಡಿದ ಆಸ್ಥಾನ ವಿದ್ವಾನ್ ಅಭಿನವ ಕಾಳಿದಾಸ ಬಸವಪ್ಪಶಾಸ್ತ್ರಿಗಳು, ಕರ್ಣಾಟಕ ಭಾಷಾರತ್ನಂ, ಆಸ್ಥಾನ ಮಹಾವಿದ್ವಾನ್ ಪಿ.ಆರ್. ಕರಿಬಸವಶಾಸ್ತ್ರಿಗಳು, ಆಸ್ಥಾನ ವಿದ್ವಾನ್ ಎನ್.ಆರ್. ಕರಿಬಸವಶಾಸ್ತ್ರಿಗಳು, ವೇದಮೂರ್ತಿ ಯಂ. ಬಸವಲಿಂಗಶಾಸ್ತ್ರಿ, ಪ್ರೊ॥ ಶಿರಸಿ. ಗುರುಶಾಂತ ಶಾಸ್ತ್ರಿಗಳು, ಮೈಸೂರು ಹೊಸಮಠದ ಬಸವಲಿಂಗಸ್ವಾಮಿಗಳು. ಹೀಗೆ ಈ ಪಟ್ಟಿ ಬೆಳೆಯುತ್ತಾ ಹೋಗುತ್ತದೆ. ಮೈಸೂರು ನಗರದಲ್ಲಿ ಎಲ್ಲರೂ ಸಂಸ್ಕೃತ ವಿದ್ಯಾಭ್ಯಾಸ ಮಾಡಬೇಕು. ಎಲ್ಲರಿಗೂ ವೇದವನ್ನು ಅಧ್ಯಯನ ಮಾಡಲು ಹಕ್ಕು ಇದೆ, ಎಂದು ವಾದ ಮಾಡುತ್ತಾ ಚಳುವಳಿಯ ರೂಪದಲ್ಲಿ ಬ್ರಾಹ್ಮಣೇತರ ಹಕ್ಕು ಭಾದ್ಯತೆ ಬಗ್ಗೆ ಹೋರಾಟ ಮಾಡಿದವರು ಮೈಸೂರು ಸ್ಟಾರ್ ಪತ್ರಿಕೆಯ ಸಂಸ್ಥಾಪಕ ಸಂಪಾದಕರಾದ "ಯಜಮಾನ್ ವೀರಸಂಗಪ್ಪನವರು", ಅಪ್ರಕಟಿತ ವೀರಶೈವ ಸಾಹಿತ್ಯ ಪ್ರಕಟಣೆ ಬಗ್ಗೆ ಒಂದು ಗ್ರಂಥಮಾಲೆಯನ್ನು ಪ್ರಾರಂಭಿಸಿ ಯಶಸ್ವಿಯಾಗಿ ನಡೆಸಿದವರು. ಈ ಬಗ್ಗೆ ಮೈಸೂರು ನಗರದ ವೀರಶೈವ ವಿದ್ವಾಂಸರ ಸಾಹಿತ್ಯ ಸೇವೆ ಬಗ್ಗೆ ಒಂದು ವಿಶೇಷ ಪುಸ್ತಕ ಬರೆಯಲು ಪ್ರಯತ್ನಪಡುತ್ತಾ ಇದ್ದೇನೆ. ೧೯೦೪ರಲ್ಲಿ ಆಸ್ಥಾನ ಮಹಾವಿದ್ವಾನ್ ಕರ್ಣಾಟಕ ಭಾಷಾರತ್ನಂ ಪಿ.ಆರ್. ಕರಿಬಸವಶಾಸ್ತ್ರಿಗಳಿಂದ ಸ್ಥಾಪನೆಗೊಂಡ "ವೀರಶೈವ ಧರ್ಮ ಸಂವರ್ಧಿನೀ ಸಭಾ" ತಿರುಮಕೊಡ್ಲು ನರಸೀಪುರದ ಪಕ್ಕದ ಮುಡುಕುತೊರೆ ಬೆಟ್ಟದ ಬುಡದಲ್ಲಿ ಮೂರು ದಿವಸ ನಡೆಯುತ್ತಾ ಇದ್ದು, ಅಲ್ಲಿ ನಡೆಯುತ್ತಾ ಇದ್ದ ಕಾರ್ಯಕಲಾಪಗಳು ಪುಸ್ತಕ ರೂಪದಲ್ಲಿ ಮುದ್ರಣವಾಗಿ

ಪ್ರತಿವರ್ಷ ವಿತರಿಸಲ್ಪಡುತ್ತಾ ಇತ್ತು. ಹೀಗೆ ಇಪ್ಪತ್ತೈದು ವರ್ಷ ಸಭೆಯ ಪ್ರಮುಖ ಲೇಖನಗಳನ್ನು "ಉಪನ್ಯಾಸ ಸಂಗ್ರಹ" ಎಂಬ ಹೆಸರಿನಲ್ಲಿ ಪ್ರೊ॥ ಶಿರಸಿ ಗುರುಶಾಂತ ಶಾಸ್ತ್ರಿಗಳು ಸಂಪಾದಿಸಿ ಪ್ರಕಟಿಸಿದ್ದಾರೆ.

ಅಂದಿನ ದಿನಮಾನಕ್ಕೆ ಹಣಕ್ಕೆ ಬಹಳ ಬೆಲೆ, ಮಹಾಜನತೆಗೆ ಬಹಳ ಕಷ್ಟ, ದಾನಿಗಳು ಮನಸ್ಸು ಮಾಡಿದರೆ ಮಾತ್ರ ಸಾಹಿತ್ಯ ಪ್ರಸಾರ. ಈ ನಿಟ್ಟಿನಲ್ಲಿ ಮೈಸೂರು ನಗರದ ವಿದ್ವಾಂಸರು ಆಲೋಚಿಸಿ ಸಾಮಾನ್ಯ ಜನರಿಗೆ ಧರ್ಮ ಮುಟ್ಟಬೇಕಾದರೆ, ಅವರ ಅಧ್ಯಯನಕ್ಕೆ ಸುಲಭವಾಗಿರಬೇಕು ಎಂಬುದನ್ನು ಬೇಗ ಗ್ರಹಿಸಿ ಭೀಮಕವಿ ಬಸವ ಪುರಾಣವನ್ನು ಓಲೆಗರಿಯಿಂದ ಪ್ರತಿಮಾಡಿ, ಗ್ರಂಥ ಸಂಪಾದನೆ ಮಾಡಿ, ನಂತರ ಶುದ್ಧ ಪ್ರತಿಯನ್ನು ಸಿದ್ಧಪಡಿಸಿ ಸೂಕ್ಷ್ಮವಾಗಿ, ತಲಸ್ಪರ್ಶಿಯಾಗಿ ಅಧ್ಯಯನ ಮಾಡಿ ಅದರ ಗದ್ಯಾನುವಾದವನ್ನು "ಬಸವರಾಜ ವಿಜಯ ೧೯೨೪" ಹೆಸರಿನಲ್ಲಿ ಪ್ರಕಟಪಡಿಸಿದ ಕೀರ್ತಿ ಎನ್.ಆರ್. ಕರಿಬಸವಶಾಸ್ತ್ರಿಗಳದು. ಅದೇ ರೀತಿ ಅವರಿಂದಲೇ ಒವಿರೂಪಾಕ್ಷ ಪಂಡಿತಾರಾಧ್ಯ ವಿರಚಿತ "ಚೆನ್ನಬಸವ ಪುರಾಣ" ಚನ್ನಬಸವೇಶ ವಿಜಯ ಎಂದು ಪ್ರಕಟವಾಗಿದೆ.

ಕಂಚಿ ಶಂಕರಾರಾಧ್ಯ ವಿರಚಿತ ಸಂಸ್ಕೃತ ಬಸವ ಪುರಾಣಂ ಕೃತಿಯನ್ನು ಶಾಸ್ತ್ರ ಶುದ್ಧವಾಗಿ ಸಂಪಾದಿಸಿ ಹೊಸದಾಗಿ ಕನ್ನಡ ಟೀಕನ್ನು ಬರೆದು ಪ್ರಕಟಿಸಿದ ಕೀರ್ತಿ ಪಿ.ಆರ್. ಕರಿಬಸವ ಶಾಸ್ತ್ರಿಗಳದು. ಅದೇ ರೀತಿ ಅದರ ಸಮಗ್ರ ಗದ್ಯಾನುವಾದವನ್ನು "ಕನ್ನಡ ಬಸವೇಶ ವಿಜಯ" ಹೆಸರಿನಲ್ಲಿ ಪ್ರಕಟಪಡಿಸಿದರು. ಭೀಮಕವಿ ಬಸವ ಪುರಾಣ ಇನ್ನೊಂದು ಗದ್ಯಾನುವಾದ ಬಂದಿದ್ದು ಕರ್ತೃ ಗೊತ್ತಿಲ್ಲ.

ಯಂ ಬಸವಲಿಂಗಶಾಸ್ತ್ರಿ ವಿರಚಿತ ಸಿಂಗಿರಾಜಪುರಾಣ ವಿಜಯ ಹದಿನೆಂಟು + ಆರನೂರ ಇಪ್ಪತ್ತುಮೂರು ಪುಟದ ಪುಸ್ತಕ ಬಹಳ ಸುಂದರವಾಗಿ ಮುದ್ರಣವಾಗಿದೆ. ಪ್ರಸ್ತಾವನೆ ಕಡೆಯಲ್ಲಿ ಈ ಮಾಹಿತಿ ಇದೆ. ಅದನ್ನು ಯಥಾವತ್ತಾಗಿ ಕೊಡಲಾಗಿದೆ. ಸಿಂಗಿರಾಜ ಮಹಾಕವಿಯಿಂದ ವಾರ್ಧಿಕಷಟ್ಪದೀ ರೂಪವಾಗಿ ಬರೆಯಲ್ಪಟ್ಟ ಸಿಂಗಿರಾಜಪುರಾಣದಲ್ಲಿ ಶ್ರೀ ಬಸವೇಶ್ವರರ ಅರವತ್ತುನಾಲ್ಕು ಪವಾಡಗಳೂ ಮತ್ತು ವೀರಶೈವಮತದ ಉತ್ಪತ್ತಿಯೂ ಸ್ಥಿತಿಯೂ ಮೋಕ್ಷವೂ ಇವುಗಳ ವಿಷಯಗಳೂ ಮತ್ತು ವೀರಶೈವಮತವನ್ನವಲಂಬಿಸಿದ ಮಹನೀಯರುಗಳು ವೀರಶೈವ ಸಿದ್ಧಾಂತ ಮಾರ್ಗವನ್ನನುಸರಿಸಿ ಯಾವ ರೀತಿಯಾಗಿ ನುಡಿದು ಯಾವ ರೀತಿಯಾಗಿ ನಡೆದಿರುವರೋ? ಆ ವಿಷಯಗಳೂ ಮತ್ತೂ ಶ್ರೀ ಬಸವೇಶ್ವರರು ವೀರಶೈವಮತಿಯರಿಗೆಲ್ಲಾ ಯಾವ ರೀತಿಯಾಗಿ ಸಿದ್ಧಾಂತಾರ್ಥವನ್ನು ಬೋಧಿಸಿ ಯಾವ ರೀತಿಯಾಗಿ ವೀರಶೈವ ಸಿದ್ಧಾಂತೋಕ್ತಾಚಾರಗಳ್ನು ಈ ಭೂಲೋಕದಲ್ಲಿ ವ್ಯವಹಾರಕ್ಕೆ ತಂದರೋ? ಆ ವಿಷಯಗಳೂ ಸಪ್ರಮಾಣಗಳೊಡನೆ ಪ್ರತಿಪಾದಿಸಲ್ಪಟ್ಟಿದ್ದರೂಕೂಡ, ಈ ಗ್ರಂಥಕರ್ತನಾದ ಸಿಂಗಿರಾಜನು ಭಕ್ತಿ ಪಾರವಶ್ಯದಿಂದ ಎಲ್ಲಾ ವಿಷಯಗಳನ್ನು ಸಂಕ್ಷೇಪಿಸಿ ಬೆಡಗಿನ ನುಡಿಗಳ ಗಡಣದಿಂದಲೇ ಈ ಗ್ರಂಥವನ್ನು ರಚಿಸಿರುವನು. ಆದುದರಿಂದಲೇ ಈ ಗ್ರಂಥಶೈಲಿಯ ಶ್ರಮಸಾಧ್ಯವಾಯಿತಲ್ಲದೆ, ಸುಲಭ ಸಾಧ್ಯವಾಗಲಿಲ್ಲವೆಂಬುದಕ್ಕೆ ಈ ಗ್ರಂಥವು ಮತೀಯರಲ್ಲಿ ಪ್ರಚಾರಕ್ಕೆಬಾರದೆ ಗುಪ್ತವಾಗಿದ್ದ ವಿಷಯವೇ ಪ್ರತ್ಯಕ್ಷ ಪ್ರಮಾಣವಾಗಿತ್ತು. ಬಳಿಕ ಈ ಗ್ರಂಥನಿರ್ಮಾಣಮಾಡುವ ವಿಷಯದಲ್ಲಿ ನಾನು ನಮ್ಮ ತಂದೆಗಳಿಂದ ವಿಶೇಷವಾಗಿ ಪ್ರೋತ್ಸಾಹಿಸಲ್ಪಟ್ಟವನಾಗಿ ಅನಂತರ ನಾನೂ ಧನ್ಯವಾಗುವುದಕ್ಕೋಸ್ಕರ ವಿಚಾರ ಮಾಡಿ ಈ ಗ್ರಂಥದಲ್ಲಿ ಹೇಳಿರುವ ವಿಷಯಗಳನ್ನೆಲ್ಲಾ ಸರ್ವರಿಗೂ ಸುಲಲಿತವಾದ ಶೈಲಿಯಿಂದ ಸ್ಪಷ್ಟಾರ್ಥವಾಗಿ ಮಾಡಿಕೊಡಬೇಕೆಂದು ಯೋಚಿಸಿ



ಆ ಬಸವಾದಿ ಪ್ರಮಥರ ಕೃಪಾಕಟಾಕ್ಷದಿಂದ ಬಿಡುಗನ್ನಡನುಡಿಯಿಂದಲೇ ಬರೆದು ಇದಕ್ಕೆ ಸಿಂಗಿರಾಜಪುರಾಣ ವಿಜಯ ಎಂಬುದಾಗಿ ಹೆಸರನ್ನಿಟ್ಟು ಶಾಲಿವಾಹನ ಶಕ ೧೮೩೪ನೇ ವಿರೋಧಿಕೃತ ಸಂವತ್ಸರದ ಆಶ್ವಯುಜ ಶುದ್ಧ ಪಾಡ್ಯದಲ್ಲಿ ಈ ಗ್ರಂಥವನ್ನು ಪೂರ್ಣಗೊಳಿಸಿರುತ್ತೇನೆ. "ನವೀರಶೈವ ಸದೃಶಮತಮಸ್ತಿ ಜಗತ್ರಯೆ" ಅಂದರೆ ಪಾರಮೇಶ್ವರಾಗಮದಲ್ಲಿ ಪರಶಿವನು ಪಾರ್ವತಿಯನ್ನು ನೋಡಿ ಎಲೈ ಪಾರ್ವತಿಯೇ! ವೀರಶೈವಮತಕ್ಕೆ ಸಮಾನವಾದ ಮತವು ಈ ಮೂರುಲೋಕದಲ್ಲಿಯೂ ಇಲ್ಲವೆಂಬುದಾಗಿ ಹೇಳಿರುವುನಾದರಿಂದ ಅಂತೊಪ್ಪುವ ವೀರಶೈವ ಮತೀಯರೆಲ್ಲಾ ಇದರಲ್ಲಿ ಗುಣೈಕಗ್ರಹಣವನ್ನು ಮಾಡಿ ನನ್ನ ಶ್ರಮವನ್ನು ಸಾರ್ಥಕಮಾಡುವರೆಂದು ನಂಬಿರುತ್ತೇನೆ.

ಮತ್ತು ಈ ಗ್ರಂಥವನ್ನು ಬರೆಯತಕ್ಕ ಕಾಲದಲ್ಲಿ ನನಗೆ ಸಂಶಯವಾದ ಒಂದೊಂದು ವಿಷಯವನ್ನು ವಿಚಾರಮಾಡಿ ತಿಳುವಳಿಕೆಯನ್ನುಂಟು ಮಾಡಿಕೊಟ್ಟ ನಮ್ಮ ವಿದ್ಯಾಗುರುಗಳಾದ ಮೈಸೂರು ಶ್ರೀಮನ್ಮಹಾರಾಜಾಕಾಲೇಜು ಕರ್ಣಾಟಕ ಸೀನಿಯರ್ ಪಂಡಿತರಾದ ವೇ॥ ಪಿ.ಆರ್. ಕರಿಬಸವಶಾಸ್ತ್ರಿಗಳವರಿಗೆ ಯಾವಾಗಲೂ ವಂದಿಸುತ್ತೇನೆ."

ತಾ॥ ೧೬-೯-೧೯೧೧ ಶಿಷ್ಟ ಜನವಿಧೇಯ

ಮೈಸೂರು ಯಂ. ಬಸವಲಿಂಗಶಾಸ್ತ್ರಿ

ಬಸವಣ್ಣನವರ ಷಟ್‌ಸ್ಥಲವಚನ ಮೊದಲು ಸಂಪಾದನೆ ಮಾಡಿದ್ದು ಬಳ್ಳಾರಿ ಮರಿಶಂಕರದೇವರು ಕ್ರಿ.ಶ. ೧೮೮೬ರಲ್ಲಿ (ಬಸವಣ್ಣನವರ ಷಟ್‌ಸ್ಥಲ ವಚನಗಳ ಪ್ರಥಮ ಪ್ರಕಟಣೆ ೧೮೮೬ ಬಸವ ಪಥ ಸಂಪುಟ ೧೫ ಸಂಚಿಕೆ ೫) ತದನಂತರ ಅನೇಕ ವಚನ ಸಂಕಲನಗಳನ್ನು ಪ್ರಕಟವಾದವು. ಬಸವಣ್ಣನವರ ಅನೇಕ ಬಿಡಿ ವಚನಗಳನ್ನು ಹತ್ತಾರು ಜನ ವಿದ್ವಾಂಸರು ಪ್ರಕಟಿಸುತ್ತಾ ಬಂದರು. ೧೯೧೧ರ ಕಾಲಮಾನದಲ್ಲಿ ಬಸವಣ್ಣನವರ ಕೆಲವು ವಚನಗಳನ್ನು ಸಿಂಗಿರಾಜಪುರಾಣದಲ್ಲಿ ಅಂತರಗೊಂಡಿದ್ದ ವಚನಗಳನ್ನು ಶಾಸ್ತ್ರ ಶುದ್ಧವಾಗಿ ಪ್ರಕಟಿಸಿದವರು ಮೈಸೂರಿನ ವೇ॥ ಯಂ. ಬಸವಲಿಂಗಶಾಸ್ತ್ರಿಗಳು ಆ ವಚನಗಳನ್ನು ಯಥಾವತ್ತಾಗಿ ಕೊಡಲಾಗಿದೆ.

೧) ನಿಮ್ಮ ಪ್ರಸಾದಮುಟ್ಟಿ ಎನ್ನ ಕರ್ಮಹರಿಯಿತ್ತು
ನಿಮ್ಮ ಪ್ರಸಾದವನುಂಡು ನಾನು ಭವಗೆಟ್ಟೆನಯ್ಯಾ
ಮನಪರುಷ ದೃಷ್ಟಿಪರುಷ ಭಾವಪರುಷ
ನಡೆಪರುಷ ನುಡಿಪರುಷವಾಯಿತು
ಲಿಂಗಗಣಂಗಳ ಕೂಡಲಸಂಗ ನಿಮ್ಮ ಶರಣರ
ಅನುಭಾವದಿಂದೆ ನಾನು ಸುಖಿಯಾದೆನಯ್ಯಾ

॥ ೧ ॥ ಪುಟ ೧೪೫ ಎಂಟನೆಯ ಸಂಧಿ

೨) ಅಯ್ಯಾ ಬ್ರಹ್ಮಂಗೆ ಹಸ್ತಪರುಷ
ವಿಷ್ಣುವಿಗೆ ನಯನಪರುಷ
ರುದ್ರಂಗೆ ವಾಕ್ಯಪರುಷ ಕೂಡಲಸಂಗನ ಶರಣರಿಗೆ
ಪಾದಪರುಷವಯ್ಯಾ

॥ ೨ ॥ ಪುಟ ೧೪೬ ಎಂಟನೆಯ ಸಂಧಿ

೩) ಎನ್ನ ಕುಲದೈವವು ಶಿವಶರಣರು,
ಎನ್ನ ಮನದೈವವು ನಿಮ್ಮವರಯ್ಯಾ ಶಿವಶರಣರು
ನಿಮ್ಮ ಶರಣರ ಸೇವೆಗಾಗಿಯೆ ಎನ್ನ ತನುವು ಮೀಸಲು
(ಮತ್ತೊಂದಕ್ಕೆ ಉಪಯೋಗಿಸದಿರುವುದು) (ಸಂಪಾದಕರ ಸ್ವಂತ ನುಡಿ)
ಎನ್ನ ಮನವು ಮೀಸಲು, ಎನ್ನ ನಯನವೂ ಮೀಸಲು ದೇವಾ!
ಕೂಡಲಸಂಗಮದೇವಾ

॥ ೩ ॥ ಪುಟ ೧೪೬ ಎಂಟನೆಯ ಸಂಧಿ

೪) ಸದ್ಗುರುವಿನ ವಚನದಿಂದ ಕಿವಿಯ ಸೂತಕ ಹೋಯಿತ್ತು
ಸದ್ಭಕ್ತರನ್ನು ಕಂಡುದರಿಂದ ಕಂಗಳ ಸೂತಕ ಹೋಯಿತ್ತು
ನಿಮ್ಮ ಪಾದವನ್ನು ಮುಟ್ಟಿದೆನಾದುದರಿಂದ ಎನ್ನ ಶರೀರದ ಸೂತಕ ಹೋಯಿತ್ತು,
ನೀವು ಉಂಡು ಮಿಕ್ಕ ಪ್ರಸಾದವನ್ನು ಕೊಂಡೆನು ಆದುದರಿಂದ
ಬಾಯಸೂತಕ ಹೋಯಿತ್ತು,
ನಾನು ನಿಮ್ಮ ಶರಣರ ಅನುಭಾವಿಯಾಗಲಾಗಿ ನಾನಾ ಸೂತಕ ಹೋಯಿತ್ತು,
ನೀವಲ್ಲದೆ ಅನ್ಯವಿಲ್ಲೆಂದು ಅರಿದೆನು ಆದುದರಿಂದ ಎನ್ನಯ
ಮನದ ಸೂತಕವೂ ಹೋಯಿತ್ತು ಕೂಡಲಸಂಗಮದೇವಾ

॥ ೪ ॥ ಪುಟ ೧೪೬ ಎಂಟನೆಯ ಸಂಧಿ

೫) ನಿಮ್ಮ ಜಂಗಮ ನೋಡುವುದೇ ನೇತ್ರದ ಆಹಾರವಯ್ಯಾ,
ನಿಮ್ಮ ಜಂಗಮವ ಕೇಳಿಸುವುದೇ ಶ್ರೋತ್ರದ ಆಹಾರವಯ್ಯಾ,
ನಿಮ್ಮ ಜಂಗಮವವಾಸಿಸುವದೇ ನಾಸಿಕದ ಆಹಾರವಯ್ಯಾ,
ನಿಮ್ಮ ಜಂಗಮವರುಚಿಸುವುದೇ ಜಿಹ್ವೆಯ ಆಹಾರವಯ್ಯಾ,
ನಿಮ್ಮ ಜಂಗಮಕ್ಕೆ ಹೊಂದಿಸುವುದೇ ತ್ವಕ್ಕಿನ ಆಹಾರವಯ್ಯ
ಅಯ್ಯಾ ನಾನು ನಿಮ್ಮ ಶರಣರಿಗೆ ಅಧಿಕ ಪ್ರೇಮದಿಂದ ಬೇಕಾದುದನ್ನು ಕೊಡುವೆನು,
ಸಕಲ ಪದಾರ್ಥಗಳನ್ನು ನೀಡುವೆನು ಕೂಡಲಸಂಗಮದೇವಾ

॥ ೫ ॥ ಪುಟ ೧೪೭ ಎಂಟನೆಯ ಸಂಧಿ

೬) ಅಯ್ಯಾ ನಾನು ನಿನ್ನ ಭಕ್ತರಲ್ಲಿ, ಇದು ನ್ಯಾಯ ಇದು ಅನ್ಯಾಯವೆನ್ನದೆ
ಇವನು ಕುಲದವನು ಇವನು ದುಷ್ಕಲದವನೂ ಎನ್ನದೆ
ಇವನು ಸಮರ್ಥನು ಇವನು ಅಸಮರ್ಥನು ಎನ್ನದೆ
ಇವನು ಕಾಯಪುಷ್ಟಿಯುಳ್ಳಾತನು ಇವನು ಅಂಗಹೀನನೂ ಎನ್ನದೆ
ಇವನು ಶೂರನು ಇವನು ಹೇಡಿಯು ಎನ್ನದೆ
ಇವನು ಒಳ್ಳೆಯ ಚರಿತ್ರೆಯುಳ್ಳವನು ಇವನು ದೃಷ್ಟವಾದ ಚರಿತ್ರೆಯುಳ್ಳವನು ಎನ್ನದೆ
ಇವನು ನಮಗೆ ಪ್ರಯೋಜನವನ್ನು ಮಾಡತಕ್ಕವನು ಇವನಿಂದ ನಮಗೆ ಪ್ರಯೋಜನವಿಲ್ಲವೆನ್ನದೆ
ಲಿಂಗಾಂಗಿಗಳಾದವರನ್ನು ಕೂಡಲಸಂಗಮದೇವನೆಂಬೆನಯ್ಯಾ

॥ ೬ ॥ ಪುಟ ೧೪೭ ಎಂಟನೆಯ ಸಂಧಿ



**೭) ಭವಿಯಾದ ಬಿಜ್ಜಳನ ಸಿಹ್ಮಾಸನದ ಕೆಳಗೆ ಕುಳಿತು ಓಲೈಸಬಹುದೇ
ಎಂದೊಡೆ; ಹೊಲೆಹೊಲೆಯರ ಮನೆಯಲಿ ಹೊಕ್ಕು
ಚೆನ್ನಾಗಿ ಕೈಕೂಲಿಯನ್ನು ಮಾಡಿಯಾದರೂ ನಿಮ್ಮ ನಿಲುವಿಂಗೆ ನಿಲ್ಲುವೆನಲ್ಲದೆ
ಎನ್ನಯ ಹೊಟ್ಟೆಯರಕ್ಷಣಕ್ಕಾಗಿ ಸೇವಿಸಿದೊಡೆ ತಲೆದಂಡವಯ್ಯಾ ಕೂಡಲಸಂಗಮದೇವಾ**

**॥ ೭ ॥ ಪುಟ ೧೪೭ ಎಂಟನೆಯ ಸಂಧಿ**

ಮೈಸೂರು ವಿಶ್ವವಿದ್ಯಾನಿಲಯದ ಪ್ರಾಚ್ಯವಿದ್ಯಾ ಸಂಶೋಧನಾಲಯದಿಂದ ಎಚ್. ದೇವೀರಪ್ಪ ಅವರಿಂದ ಸಿಂಗಿರಾಜಕೃತ ಬಸವರಾಜ ಚಾರಿತ್ರ ಪುರಾಣವು ಸಂಪಾದನೆಗೊಂಡು ೧೯೫೦ರಲ್ಲಿ ಪ್ರಕಟವಾಗಿತ್ತು. ಮೊದಲನೇ ಮುದ್ರಣದಲ್ಲಿ "ಸಿಂಗಿರಾಜಪುರಾಣ" ಎಂದು ಪುಸ್ತಕದ ಹೆಸರನ್ನು ಇಟ್ಟುಕೊಳ್ಳಲಾಗಿತ್ತು. ೧೯೭೦ರಲ್ಲಿ ದ್ವಿತೀಯ ಮುದ್ರಣದಲ್ಲಿ ಸಂಪಾದಕರಾದ ಎಚ್. ದೇವೀರಪ್ಪನವರು ಸಿಂಗಿರಾಜಕವಿಕೃತ ಬಸವರಾಜ ಚಾರಿತ್ರ (ಸಿಂಗಿರಾಜ ಪುರಾಣ) ಎಂದು ಶೀರ್ಷಿಕೆಯನ್ನು ಬದಲಾಯಿಸಿದರು. ಮುದ್ರಿತ ಪುಸ್ತಕದ ಕಾವ್ಯದ ಗರ್ಭದಲ್ಲಿ ಬಂದಿರುವ ಬಸವಣ್ಣನವರ ವಚನಗಳನ್ನು ಬಹಳ ಅಚ್ಚುಕಟ್ಟಾಗಿ ಎಚ್. ದೇವೀರಪ್ಪನವರು ಸಂಪಾದಿಸಿದ್ದಾರೆ.

ಧಾರವಾಡದ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯಿಂದ ೨೨/೧೨/೧೯೫೪ರಲ್ಲಿ ಲಿಂ॥ ಪ್ರೊ॥ ಶಿ. ಶಿ. ಬಸವನಾಳ ಶಿವಲಿಂಗಪ್ಪನವರು ಸಂಪಾದಿಸಿದ "ಶ್ರೀ ಬಸವಣ್ಣನವರ ಹೆಚ್ಚಿಗೆ ದೊರೆತ ವಚನಗಳು" ಪುಸ್ತಕದಲ್ಲಿ ಸಿಂಗಿರಾಜ ಪುರಾಣದ ಪುಸ್ತಕದಿಂದ ಇಪ್ಪತ್ತೇಳು ವಚನಗಳನ್ನು ಸಂಗ್ರಹಿಸಿ ಕೊಟ್ಟಿದ್ದಾರೆ.

ಗದಗಿನ ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠದಿಂದ ೧೯೯೧ರಲ್ಲಿ ಪ್ರಕಟವಾದ ಶ್ರೀ ಬಸವರಾಜ ಹೂಗಾರರವರು ಸಂಪಾದಿಸಿದ "ವೀರಶೈವ ಕಾವ್ಯೋಕ್ತ ವಚನ ಸಂಪುಟ"ದಲ್ಲಿ ಸಿಂಗಿರಾಜ ಪುರಾಣದಿಂದ ಬಸವಣ್ಣನವರ ೭೩ ವಚನಗಳನ್ನು ಸಂಕಲಿಸಿ ನೀಡಿದ್ದಾರೆ. 'ಸಿಂಗಿರಾಜಪುರಾಣ ವಿಜಯ' ಗದ್ಯಾನುವಾದ ಗ್ರಂಥವನ್ನು ರಚಿಸಿದಾಗ ಯಂ ಬಸವಲಿಂಗಶಾಸ್ತ್ರೀ ಅವರಿಗೆ ದೊರೆತ ಹಸ್ತಪ್ರತಿಯಲ್ಲಿ ಇದ್ದ ಎಲ್ಲಾ ವಚನಗಳನ್ನು ತಮ್ಮ ಗದ್ಯಾನುವಾದ ಗ್ರಂಥದಲ್ಲಿ ಕೊಟ್ಟಿರುವರಾ? ಕೆಲವು ವಚನಗಳನ್ನು ಕೈಬಿಟ್ಟರಾ? ಈಗ ಅದಕ್ಕೆ ಉತ್ತರ ಹೇಳುವುದು ಕಷ್ಟ. ಗ್ರಂಥಕಾರನ ಸ್ವ ವಿಷಯವನ್ನು ಎಂಟು ಕಂದ ಪದ್ಯಗಳಲ್ಲಿ ನೀಡಿದ್ದಾರೆ. ಪ್ರಸ್ತಾವನೆಯಲ್ಲಿ ವ್ಯಾಸಾಷ್ಟಕ, ವೃಷಭಾಂಕಮಾಲಾ ಸ್ತೋತ್ರವನ್ನು ಗ್ರಂಥಾಂತ್ಯದಲ್ಲಿ ಶ್ರೀ ಬಸವಾಷ್ಟೋತ್ತರ ಶತನಾಮಾವಳಿಯ ರಗಳೆ, ಬಸವಪವಾಡಂಗಳ ರಗಳೆ ಲಘು ಕೃತಿಗಳನ್ನು ಸಂಪಾದಿಸಿ ಕೊಟ್ಟಿದ್ದಾರೆ. ಈ ಲಘು ಕೃತಿಯ ಕಡೆಯ ಸಾಲಿನಲ್ಲಿ "ಮರೆಯದೆಂದು ನಿಮ್ಮ ಪೊಗಳ್ವ ಬಸವಲಿಂಗನಕಾಯೊ ಬಸವ' ಎಂದು ಲಿಖಿಸಿರುವುದರಿಂದ ಈ ರಗಳೆಯ ಕರ್ತೃ ಬಸವಲಿಂಗ ಎಂಬ ಹೆಸರಿನ ಕವಿಯದು ಎಂದು ಸ್ಪಷ್ಟವಾಗುತ್ತದೆ.

ನನ್ನ ಅಧ್ಯಯನಕ್ಕೆ ಸಿಂಗಿರಾಜ ಪುರಾಣ ಗದ್ಯಾನುವಾದ ಗ್ರಂಥವನ್ನು ಒದಗಿಸಿಕೊಟ್ಟವರು ಧಾರವಾಡದ ಕರ್ನಾಟಕ ವಿಶ್ವವಿದ್ಯಾನಿಲಯದ ಸಂಶೋಧನಾ ವಿದ್ಯಾರ್ಥಿ ಇಂದಿನ ಬಸವನ ಬಾಗೇವಾಡಿಯು ಪ್ರಥಮ ದರ್ಜೆ ಕಾಲೇಜಿನ ಕನ್ನಡ ಅಧ್ಯಾಪಕರಾದ ಡಾ. ಶ್ರೀನಿವಾಸ ಹೊ. ದೊಡ್ಡಮನಿ ಅವರಿಗೆ ಲೇಖಕ ಸ್ನೇಹಪೂರ್ವಕ ವಂದನೆಗಳನ್ನು ಸಲ್ಲಿಸುತ್ತಾನೆ. ●

*ಪಂಡಿತ ತಾರಾನಾಥ ಆಯುರ್ವೇದ ಚಿಕಿತ್ಸಾಲಯ, ತುಮಕೂರು ಷಾಪಿಂಗ್ ಕಾಂಪ್ಲೆಕ್ಸ್, ಬಿ.ಹೆಚ್. ರಸ್ತೆ,*
*ತುಮಕೂರು-೫೭೨೧೦೨. ಮೊ : ೯೮೮೦೯ ೯೬೧೯೬*

# ಅಕ್ಕನ ವಚನಗಳ ನಿರ್ವಚನ

ಬಿದರಹಳ್ಳಿ ನರಸಿಂಹಮೂರ್ತಿ

**ಕಿಡಿಕಿಡಿಕೆದರಿದರೆ ಎನಗೆ ಹಸಿವು ತೃಷೆಅಡಗಿತ್ತೆಂಬೆನು!**
**ಮುಗಿಲು ಹರಿದುಬಿದ್ದರೆ ಎನಗೆ ಮಜ್ಜನಕ್ಕೆರೆದರೆಂಬೆನು!**
**ಗಿರಿ ಮೇಲೆಬಿದ್ದರೆ ಎನಗೆ ಪುಷ್ಪವೆಂಬೆನು!**
**ಚೆನ್ನಮಲ್ಲಿಕಾರ್ಜುನಯ್ಯ, ಶಿರ ಹರಿದುಬಿದ್ದರೆ**
**ಪ್ರಾಣ ನಿಮಗರ್ಪಿತವೆಂಬೆನು!**

(ವಚನ ಕಮ್ಮಟ, ಸಂ: ಕೆ.ಮರುಳಸಿದ್ದಪ್ಪ, ಕಿ.ರಂ.ನಾಗರಾಜ, ೧೯೮೩, ಪುಟ ೬೦-೧)

ಅನುಭಾವ ಹೂವಿನಂಥ ಪದ. ಹೂವಿನಷ್ಟೆ ನವಿರಾದ ಅನುಭವ. ಹೂವಿನ ಹಾಗೆಯೆ ಪರಿಮಳಿತ ಪರಿಕಲ್ಪನೆ ನಿಜ. ಆದರದು ಹೂವಿನಷ್ಟು ಹಗುರವೂ ಅಲ್ಲ, ಹೂವಿನಂತೆ ಸುಲಭವಾಗಿ ಮುಡಿಗೇರುವುದೂ ಇಲ್ಲ. ಯಾಕೆಂದರೆ ಅನುಭಾವದ್ದು ಹೂವಿನ ಹಾದಿಯಲ್ಲ, ಬರಿ ಕಲ್ಲು ಭಾರಿ ಮುಳ್ಳಿನದು. ಸಾಧಕಿ\ಕ ಆತ್ಯಂತಿಕ ಅಪಾಯಗಳಿಗು ತಲೆ ಕೊಡಲು ತಯಾರಿರಬೇಕು. ಅನುಭಾವದ ಹಂಬಲವನ್ನೆ ಕಬಳಿಸಿದರೂ ಸುಮ್ಮಾನದಿಂದಿರಬೇಕು. ಎಲ್ಲ ನಿರೀಕ್ಷೆಗಳು ತಲೆಕೆಳಗಾಗಿ ಇಡಿ ಜೀವಿತವನ್ನೆ ಬಲಿತೆಗೆದುಕೊಂಡರೂ, ಜೀವವನ್ನೆ ನುಂಗಿದರೂ ಧೃತಿಗೆಡದ ಬಹಿರಂಗ, ನಿಷ್ಠೆಬಿಡದ ಅಂತರಂಗದ ಛಲವಿರಬೇಕು ಶರಣೆ\ಣಗೆ ಎನ್ನತ್ತೆ ಈ ವಚನ. ಸಾಧನೆಗೆ ಪ್ರತಿಯಾಗಿ ಒದಗುವ ಶಾಪ ಶಿಕ್ಷೆ ದುರಂತವನ್ನೂ ವರದಾನವೆಂದೆ ಸ್ವೀಕರಿಸುವ ಸಾಗರೋಪಮ ಸಮಾಧಾನ, ಪರ್ವತೋಪಮ ಸ್ತಿಮಿತ ಇರಬೇಕೆನ್ನತ್ತೆ. ಯಾಕೆಂದರೆ ಭಕ್ತಿ ಇದ್ದರೆ ಪರಿಪೂರ್ಣವಾಗಿರತ್ತೆ ಅಥವ ಇರುವುದೆ ಇಲ್ಲ ಅಷ್ಟೆ. ಕಿಂಚಿತ್ಭಕ್ತಿ ಪಾರ್ಶ್ವಭಕ್ತಿ ಸಾಧ್ಯವಿದ್ದಷ್ಟು ಭಕ್ತಿ ಎಂಬುದಿಲ್ಲವೆ ಇಲ್ಲ. ತುಸುವೆ ಭಕ್ತಿ ಇದ್ದಷ್ಟು ಶಕ್ತಿ ಸಾಕಷ್ಟು ಯುಕ್ತಿ ಬಳಸಿ ನೀಕೊಡೆ ನಾಬಿಡೆ ಎಂದು ಪೀಡಿಸಿ ಇಷ್ಟಾರ್ಥ ಸಾಧಿಸುವ ಚಾಣಾಕ್ಷ ತಂತ್ರವಿದಲ್ಲ. ಸತ್ತಮೇಲೆ ಸುಖಸುರಿದುಕೊಳ್ಳುತ್ತ ನೆಮ್ಮದಿ ಹೊದ್ದುಕೊಳ್ಳುವ ಪೊಳ್ಳು ಮುಕ್ತಿಯನ್ನಲ್ಲ ಅನುಭಾವಿ ಬಯಸುವುದು. ಅಕ್ಕನ ಭಕ್ತಿ ಅಳ್ಳೆದೆಯದಲ್ಲ, ತೀವ್ರತಮವಾದ್ದು. ದೇಹ ಪ್ರಾಣ ಆತ್ಮ ಎಲ್ಲದರ ಹಂಗುಹರಿದು ಹೋರಾಡುವ ಆತ್ಯಂತಿಕ ಭಕ್ತೆ ಅವಳು. ಇಲ್ಲಿದ್ದಂತೆಯೆ ಉಭಯವಳಿದು ಅಗಣಿತನೂ ಸರ್ವಶಕ್ತನೂ ನಿರಾಕಾರಿಯೂ ವಿಶ್ವಾತ್ಮಕನೂ ಆದ ಬಯಲ ಚೆಲುವನಲ್ಲಿ ಐಕ್ಯಳಾಗಬೇಕೆಂಬ ಅಪರೂಪದ ಅನುಭಾವಿ ಅವಳು. ಮೇಲಿನ ವಚನ ಶಬ್ದಾರ್ಥಕೋಶದನ್ವಯ ಒಂದು ಬಗೆ ಅಕ್ಷರಶಃ ದುಃಸಾಧ್ಯ ಚಿತ್ರಣ ನೀಡಿದರೆ, ಸಾಂಕೇತಿಕ ಕಾವ್ಯಾತ್ಮಿಕ ನೆಲೆಯಲ್ಲಿ ಮತ್ತೊಂದೆ ಬಗೆಯ ತಾತ್ಪರ್ಯ ಹೊಮ್ಮಿಸತ್ತೆ. ಹೊರಗೆಲ್ಲ ಕಿಡಿಕಿಡಿ ಕೆದರಿ ಕಾಳ್ಗಿಚ್ಚೆದ್ದರೆ ಧೈರ್ಯೋಪಾಯದಿಂದ ಎದುರಿಸಬೇಕು. ಹೊಟ್ಟೆಯೊಳಗೆ 'ಕಿಡಿಕಿಡಿಕೆದರಿದ' ಹಸಿವನ್ನೆ ಆಹಾರ ನೀರೆಂದು ಭಾವಿಸಿ 'ಹಸಿವು ತೃಷೆ ಅಡಗಿತ್ತೆಂಬೆನು' ಎಂಬ ನಿಲುವ ತಳೆಯುವುದು, ಕಡೆ



ತನಕ ನಿಭಾಯಿಸಿ ಜಯಿಸುವುದು ಹೇಳುವಷ್ಟು ಸುಲಭವಲ್ಲ. ಆದರೆ ಅಕ್ಕನಂಥ ಮೇರುಗಿರಿ ಅನುಭಾವಿಗದು ಅಸಾಧ್ಯವೆ? ಬಟ್ಟಬಯಲ ಶೂನ್ಯಚಾರಣದಲ್ಲಿ 'ಮುಗಿಲು ಹರಿದು ಬಿದ್ದರೆ' ಜೀವ ಹಾರಿ ದೇಹ ಕೊಚ್ಚಿಹೋದರೆ ಅದೆ ಅಪೂರ್ವ ಅಭ್ಯಂಜನವೆಂದುಕೊಂಡು 'ಎನಗೆ ಮಜ್ಜನಕ್ಕೆರೆದರೆಂಬೆನು!' ಎಂಬುದು ಭೌತವಾದಿ ನಿಟ್ಟಿನಿಂದ ಸಾಧ್ಯವೆಯಿಲ್ಲ ಎನಿಸೀತು. ಆದರೆ ಎಲೆಮರೆಕಾಯಂತೆ ಯಾರ ಗಮನಕ್ಕು ಬಾರದೆ ಪಕ್ವಗೊಂಡ ಅಕ್ಕನ ಅಸಾಧ್ಯ ಸಿದ್ಧಿಯ ಸಾಧಕಿ. ಹೀಗವಳಿಗೆ ಅನುಭಾವ ಮಜ್ಜನಕ್ಕೆರೆವವರು ಯಾರು? ಪಶುಪತಿನಾಥನ ಭೂತಗಣಂಗಳೆ? ಶ್ರೀಶೈಲ ಚೆನ್ನಮಲ್ಲಿಕಾರ್ಜುನ-ಭ್ರಮರಾಂಬೆಯರ ಅದೃಶ್ಯ ಕಿಂಕರಿಯರೆ? ಅವಳ ಮೇಲೆ ಬೀಳಲಿರುವುದು ಮೇರುಗಿರಿಯೆ? ಕೈಲಾಸಪರ್ವತವೆ? ಶ್ರೀಶೈಲಗಿರಿಯೆ? 'ಮೇಲೆಬಿದ್ದರೆ' ಎಂದರೆ ಅಕ್ಷರಶಃ ಬೆಟ್ಟವೆ ಪ್ರಳಯ ಸದೃಶವಾಗಿ ಕಡಿದುಕೊಂಡು ಬೀಳತ್ತೆಂದೆ? ಅಕ್ಕ ಹುಡುಕಿ ಹೊರಟ ಶ್ರೀಗಿರಿಯೆ ಅವಳ ಸಾಧನೆ ಮೆಚ್ಚಿ ತಾನಾಗಿ ಬಳಿ ಸಾರೀತೆಂದೆ? 'ಎನಗೆ ಪುಷ್ಪವೆಂಬೆನು' ಎಂಬಭಿವ್ಯಕ್ತಿ ಅವಳ ನಿಶ್ಚಲಭಕ್ತಿಗೆ ಕರಗಿ ಅನುಭಾವಗಿರಿಯೆ ಹೂವಾಗಿಳಿದು ಮುಡಿಗೆ ಮುಡಿಸಿದಂಥ ಅನುಭವದ ಕಲ್ಪನೆ ಕೊಡತ್ತೆ. ಅಷ್ಟೆಲ್ಲ ಅವಘಡದ ನಂತರ''ಶಿರ'ವೆ\ವೂ 'ಹರಿದು ಬಿದ್ದಡೆ' ಅಂದರೆ ತಲೆಯೆ ಉರುಳಿದರೆ ಎಂಬರ್ಥವೊ? ಹೊನ್ನಕಳಶವಾದ ಶಿರದಲ್ಲಿನ ಈ ಶರೀರದಿರುವಿಕೆಯ ಮೂಲಪ್ರಜ್ಞೆಯೆ ಅಡಗಿಹೋದರೆ ಎಂದರ್ಥವೊ? ದೇಹವೆ ನಿರ್ನಾಮವಾಗಿಬಿಡುವಂಥ ದುರ್ಭರ ಕ್ಷಣದಲ್ಲು 'ಪ್ರಾಣ ನಿಮಗರ್ಪಿತವೆಂಬೆನು!' ಎಂದು ಅಂತಿಮವಾಗಿ ಆತ್ಮಾರ್ಪಣೆ ಮಾಡಿಕೊಳ್ಳುವ ಏಕೋನಿಷ್ಠೆ ವೀರಭಕ್ತಿ ತಳೆಯಬಲ್ಲ ಅಕ್ಕನ ಆಧ್ಯಾತ್ಮಿಕ ಯಶಸ್ಸಿಗೆ ಸಾಟಿ ಎಲ್ಲಾದರುಂಟೆ? ಅದೆಂಥ ಪ್ರಚಂಡ ಆತ್ಮವಿಶ್ವಾಸ! ಅದೆಂಥ ಅಸಾಧ್ಯ ಸಾಹಸ! ಇಡಿ ವಚನ ದೇಹ ಪ್ರಜ್ಞೆ ಮೇಲಾಗುವ ಆಘಾತಗಳಿಂದಲೆ ಸಾಧಕಿಯ ಆತ್ಮಪ್ರಜ್ಞೆ ಜಾಗ್ರತಗೊಳ್ಳುವ ದೃಷ್ಟಾಂತಕ್ಕೆ ಸಾಂಕೇತಿಕ ದರ್ಪಣವಾಗತ್ತೆ. 'ಎನಗೆ' ಶಬ್ದ ಮೂರು ಬಾರಿ ಪುನರುಚ್ಚರಿತವಾಗಿರುವುದರಲ್ಲಿ ವೈಯಕ್ತಿಕ ಹೆಚ್ಚುಗಾರಿಕೆಗೆ ವ್ಯತಿರಿಕ್ತವಾಗಿ ತನ್ನ ಅಸ್ಮಿತೆಯನ್ನೆ ಅಲ್ಲಗಳೆಯುವ ಧ್ವನಿಯಿದೆ. 'ಪ್ರಾಣ ನಿಮಗರ್ಪಿತವೆಂಬೆನು' ಪದಸಮುಚ್ಚಯ ಇಷ್ಟದೈವದೊಳಗೆ ಐಕ್ಯವಾಗುವ ಹಂಬಲಕ್ಕೆ ತೋರ್ಬೆರಳಾಗತ್ತೆ. ಆದರೆ ಉಡುತಡಿ ಉದ್ಧಟ ಕೌಶಿಕನ ಉಪಟಳ, ಕಲ್ಯಾಣದ ದುರ್ಮದಕಿನ್ನರರ ದೈಹಿಕ ಕಿರುಕುಳ, ಮಹಾಮನೆ ಮತ್ಸರಿ ಮಹಿಳೆಯರ ಅಸಹನೆ ಹ್ವಾಕೆಕತೆ(ವ್ಯಂಗ್ಯ ಮೂದಲಿಕೆ), ಶ್ರೀಗಿರಿ-ಕದಳಿವರೆಗಿನ ಅಕ್ಕನ ದಿಗಂಬರ ಚಾರಣದ ಹಾದಿಯುದ್ದಕ್ಕು ತರತರದ ಅಪಚಾರ ಅವಮಾನ ಅನ್ಯಾಯದ ನಡೆ ಮುಡಿಹಾಸಿ ಅಸಂಖ್ಯಾತರೊಡ್ಡಿದ ಭೌತಿಕ ಪ್ರತಿರೋಧಗಳ ಪ್ರತಿಮಾತ್ಮಕ ಚಿತ್ರಣವಾಗಿ ಪರಿಭಾವಿಸಿದಾಗ ಈ ವಚನ ನೀಡುವ ಸುಡುಸುಡು ಅನುಭೂತಿಯೆ ಬೇರೆ ಸ್ತರದ್ದು. ಅದಿನ್ನೂ ಅಮೂಲ್ಯವಾದ್ದು. ಈ ವಚನ ಸಕಲ ಚರಾಚರಗಳ ಸಮಷ್ಟಿಯೆ ಸಿಡಿದೆದ್ದಾಗಿನ ಪ್ರಚಂಡ ಪ್ರಳಯದಲ್ಲಿ ಸಾಧಕರ ನಿಲುವು ಎಂತಿರಬೇಕೆಂದು ಅಗಾಧ ವಿಶ್ವಾತ್ಮಕಸ್ತರದಲ್ಲಿ ಸೂಚಿಸಿದರೆ, ಇನ್ನೊಂದು ವಚನ ವ್ಯಷ್ಟಿಮಟ್ಟದಲ್ಲಿ ಎಂಥಾ ನಿಷ್ಠುರ ಶ್ರದ್ಧೆ ತ್ಯಾಗ ಬುದ್ಧಿಯಿರಬೇಕು ಸತ್ವಪರೀಕ್ಷೆಯ ಕಠಿಣ ತಮ ಹಂತಗಳಲ್ಲಿ ಎಂಬುದನ್ನ ವೈಯಕ್ತಿಕ ಮಟ್ಟದಲ್ಲಿ ಸೂಚಿಸತ್ತೆ: 'ಮನೆಮನೆದಪ್ಪದೆ ಕೈಯೊಡ್ಡಿ ಬೇಡುವಂತೆ ಮಾಡಯ್ಯ! \ಬೇಡಿದರೆ ಇಕ್ಕದಂತೆ ಮಾಡಯ್ಯ!\ಇಕ್ಕಿದರೆ ನೆಲಕ್ಕೆ ಬೀಳುವಂತೆ ಮಾಡಯ್ಯ!\ನೆಲಕ್ಕೆ ಬಿದ್ದರೆ ನಾನೆತ್ತಿಕೊಂಬುದಕೆ ಮುನ್ನವೇ\ಶುನಿ ಎತ್ತಿಕೊಂಬಂತೆ ಮಾಡಾ, ಚೆನ್ನಮಲ್ಲಿಕಾರ್ಜುನಯ್ಯ!(ಅಕ್ಕನ ವಚನಗಳು, ಸಂ: ಡಾ.ಎಲ್.ಬಸವರಾಜು, ೧೯೬೬, ಪುಟ ೧೨೩)'. ತರಾವರಿಯಾಗಿ ಸತ್ವಪರೀಕ್ಷೆ ಮಾಡಿ ತಮ್ಮೊಳಗನ್ನ ಒರೆದೊರೆದು ನೋಡುವಂತೆ

ಇಷ್ಟದೈವವನ್ನೆ ಒತ್ತಾಯಿಸುವ ಈ ಪರಿ ನಿಷ್ಠುರ ಭಕ್ತಿಯ ಅಕ್ಕ ಅಲ್ಲಮ ಬಸವಣ್ಣರ ಯುಗವೆಲ್ಲಿ? ನಾಚಿಕೆ ಮಾನ ಮರ್ಯಾದೆ ಮೂರೂ ಬಿಟ್ಟವರೆ ಊರಿಗೆ ದೊಡ್ಡವರೆಂಬಂತಾಗಿರುವ ನಮ್ಮ ಸಾಂಸ್ಕೃತಿಕ ಅವನತಿ ಕಾಲಮಾನವೆಲ್ಲಿ? ಅದ ಕೊಡು ಇದಕೊಡು ಎಂದು ದೇವರಿಗೆ ಗಂಟುಬಿದ್ದು ದಟ್ಟ ದರಿದ್ರರಂತೆ ಬರಿ ಭಿಕ್ಷೆ ಬೇಡುವ ಬೂಟಾಟಿಕೆ ಭಕ್ತರೆತ್ತ? ಹಾಳುಹೊಟ್ಟೆ ಕೆಟ್ಟಹಸಿವೆಂಬ ಮರೆವಿಗೆ ಮಟ್ಟಹಾಕಿ ಅರಿವಿನ ನಿಜದ ಹಾದಿಗೆ ಕರೆದೊಯ್ದು ಉಪಕಾರ "ಮಾಡಯ್ಯಾ' ಎಂದು ಪರಿಪರಿ ಬೇಡುವ ಪರಿಶುದ್ಧ ಮನಸ್ಥಿತಿಯ ಅಕ್ಕನೆತ್ತ? ಅವಳಿಗಲ್ಲದೆ ಮತ್ಯಾರಿಗೆ ಒಲಿದೀತು ಅನುಭಾವ ಪುಷ್ಪ? ಅವಳಿಗಲ್ಲದೆ ಮತ್ಯಾರಿಗೆ ದಕ್ಕೀತು ಅಲೌಕಿಕವಾಗಿ ಅರಳಿದ ಅನುಭಾವ ಪುಷ್ಪದ ಸುಗಂಧಿತ ಚಿದ್ಬೆಳಕು?

●

'ಅನಿಮಿಷ', ಕ್ರಾಸ್-೭, ದುರ್ಗಿಗುಡಿ ಹಂತ ೧, ಹೊನ್ನಾಳಿ – ೫೭೭ ೨೧೭
ದಾವಣಗೆರೆ ಜಿಲ್ಲೆ ೯೮೮೦೧ ೩೦೨೦೩

## ಶ್ರದ್ಧಾಂಜಲಿ

### ಶ್ರೀ ಶಂಕ್ರಪ್ಪ ಪರಪ್ಪ ಸರಶೆಟ್ಟಿ



ತಾಳಿಕೋಟಿ ತಾಲ್ಲೂಕು ಶರಣ ಸಾಹಿತ್ಯ ಪರಿಷತ್ತಿನ ಗೌರವಾಧ್ಯಕ್ಷರಾಗಿದ್ದ ಮತ್ತು ದತ್ತಿ ದಾನಿಗಳೂ ಆಗಿದ್ದ ಶ್ರೀ ಶಂಕ್ರಪ್ಪ ಪರಪ್ಪ ಸರಶೆಟ್ಟಿಯವರು ದಿನಾಂಕ:೦೬.೦೯.೨೦೨೦ರಂದು ಲಿಂಗೈಕ್ಯರಾದರು ಎಂದು ತಿಳಿಸಲು ಬೇಸರವಾಗುತ್ತದೆ. ಅವರು ವಚನ ಸಾಹಿತ್ಯದಲ್ಲಿ ಆಳವಾದ ಅಧ್ಯಯನ ಮಾಡಿದ್ದು, ಆಧ್ಯಾತ್ಮಕ ಚಿಂತಕರಾಗಿ ಕಾಯಾ, ವಾಚಾ, ಮನಸಾ, ಬಸವಾದಿ ಶರಣರ ತತ್ವಗಳನ್ನು ಜೀವನದಲ್ಲಿ ಅಳವಡಿಸಿಕೊಂಡಿದ್ದ ಅವರು ಶರಣ ಸಾಹಿತ್ಯಕ್ಕೆ ಸಲ್ಲಿಸಿದ ಸೇವೆ ಶ್ಲಾಘನೀಯವಾಗಿದೆ.

ಶ್ರೀ ಶಂಕ್ರಪ್ಪ ಪರಪ್ಪ ಸರಶೆಟ್ಟಿ ಅವರು ಸಲ್ಲಿಸಿದ ಸೇವೆಯನ್ನು ಸ್ಮರಿಸುತ್ತಾ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು ಅವರ ಆತ್ಮಕ್ಕೆ ಶಾಂತಿಯನ್ನು ಮತ್ತು ಅವರ ಕುಟುಂಬದವರಿಗೆ ಅಗಲಿಕೆಯ ದುಃಖವನ್ನು ಸಹಿಸುವ ಶಕ್ತಿ ನೀಡಲಿ ಎಂದು ಭಗವಂತನಲ್ಲಿ ಕೋರುತ್ತದೆ.

## ಶ್ರದ್ಧಾಂಜಲಿ

### ಶ್ರೀ ಬಸವರಾಜು



ಶ್ರೀ ಬಸವರಾಜು ಅವರು ಇತ್ತೀಚೆಗೆ ಲಿಂಗೈಕ್ಯರಾದರು ಎಂದು ತಿಳಿಸಲು ಬೇಸರವಾಗುತ್ತದೆ. ಸದಾ ಚಟುವಟಿಕೆಯ, ಸೃಜನಶೀಲ ವ್ಯಕ್ತಿತ್ವ ಮೂಲಕ ಮಂಟೇಸ್ವಾಮಿ ನಾಟಕದಲ್ಲಿ ಪುಟ್ಟ ಪಾತ್ರವೊಂದರ ಮೂಲಕ ರಂಗಪ್ರವೇಶ ಮಾಡಿ ಮುಖ್ಯ ಸದಸ್ಯರೂ ಆಗಿದ್ದವರು. ಕಳೆದ ಸಾಲಿನ ಬೆಂಗಳೂರು ನಗರ ಶರಣ ಸಾಹಿತ್ಯ ಸಮ್ಮೇಳನದ ಕ್ರಿಯಶೀಲಾ ಕಾರ್ಯಕರ್ತ. ಕಳೆದ ಮಾರ್ಚಿನಲ್ಲಿ ನಡೆಯಬೇಕಿದ್ದ ಬೆಂಗಳೂರು ನಗರ ಶರಣ ಸಾಹಿತ್ಯ ಸಮ್ಮೇಳನದ ಪೂರ್ವಭಾವಿ ಸಭೆಯಲ್ಲೂ ಭಾಗವಹಿಸಿದ್ದವರು ಬಸವರಾಜ್.

ಶ್ರೀ ಬಸವರಾಜು ಅವರನ್ನು ಸ್ಮರಿಸುತ್ತಾ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು ಅವರ ಆತ್ಮಕ್ಕೆ ಶಾಂತಿಯನ್ನು ಮತ್ತು ಅವರ ಕುಟುಂಬದವರಿಗೆ ಅಗಲಿಕೆಯ ದುಃಖವನ್ನು ಸಹಿಸುವ ಶಕ್ತಿ ನೀಡಲಿ ಎಂದು ಭಗವಂತನಲ್ಲಿ ಕೋರುತ್ತದೆ.





## ಜಂಗಮ

ಡಾ. ಓ.ಎಲ್. ನಾಗಭೂಷಣಸ್ವಾಮಿ

ನದಿ ಬೆಟ್ಟದಲ್ಲಿ ಹುಟ್ಟಿ ಕಡಲಲ್ಲಿ ಮುಗಿಯುತ್ತದೆಯೇ? ಅದೊಂದು ಕೊನೆ ಇರದ ಹರಿವು ಮಾತ್ರ ಅಲ್ಲವೇ? ಅದಕ್ಕೆ ಶುರುವೂ ಇಲ್ಲ ಕೊನೆಯೂ ಇಲ್ಲ. ದೊಡ್ಡ ಪದ ಬೇಕಾದರೆ ಅನಾದಿ ಅನಂತ ಅನ್ನಿ.

ಸತತವಾದ ಹರಿವು ಇದೆಯಲ್ಲಾ ಅದೇ ಜಂಗಮ. ಜಂಗಮವೆಂಬುದು ಕ್ರಿಯಾಪದ.

ನದಿ ಸಾವಿರಾರು ಮೈಲು ಹರಿಯುತ್ತದೆ. ಅಷ್ಟುದ್ದಕ್ಕೂ ಅದು ಒಂದೇ ನದಿ ಎಂದು ತಿಳಿವುದು ನಮ್ಮ ಅನುಕೂಲಕ್ಕೆ. ನಿಜವಾಗಿ ಇರುವುದು ಮಾತ್ರ ಹಲವು ಸ್ರೋತಗಳು ಹರಿದು ಸೇರಿ ನಡೆವ ಗಮನ. ಹೆಸರಿಟ್ಟವರು ನಾವು. ಜಂಗಮವೂ ಹಾಗೆಯೇ ಹಲವು ಹರಿವುಗಳು ಸೇರಿ ಸಾಗುವ ಕೊನೆ ಮೊದಲು ಇರದ ಗಮನ.

ಸರಿ, ಅಷ್ಟುದ್ದ ಹರಿವಿನಲ್ಲಿ ಲಕ್ಷ ಕೋಟಿ ಕೋಟಿ ಕೋಟಿ ನೀರಿನ ಕಣಗಳಿರುತ್ತವಲ್ಲ, ಅವು ಒಂದೊಂದೂ ಸ್ವತಂತ್ರ, ಒಂದಕ್ಕೂ ಇನ್ನೊಂದಕ್ಕೂ ನಡುವೆ ಒಂದಷ್ಟು ಬಯಲು. ಬಯಲು ಇರದಿದ್ದರೆ ಹರಿವು ಎಲ್ಲಿಯದು? ಯಾವುದೋ ಒಂದು ನೀರಿನ ಕಣ ಹರಿವಿನಿಂದ ಬೇರೆಯಾದರೆ ಅದು ನದಿಯೂ ಅಲ್ಲ, ನೀರೂ ಅಲ್ಲ. ಗಮನದ ಭಾಗವಾಗಿ ಆದರೂ ಸ್ವತಂತ್ರವಾಗಿ ಸಾಗುವುದು ಜಂಗಮ.

ಈ ಹರಿವು ಅನುಭವ ಮಾತ್ರ, ಕೊನೆಯೇ ಇರದ ಹರಿವ ಅನುಭವಕ್ಕೆ ನಿರ್ದಿಷ್ಟ ಆಕಾರವಿಲ್ಲ, ಗುರಿಯೂ ಇಲ್ಲ, ಒಟ್ಟಾರೆ ಹರಿವಿಗೆ ಚಕ್ರಗತಿ ಇದ್ದೀತು, ಆದರೆ ನದಿಯ ಎಲ್ಲ ಕಣಗಳೂ ಸಮುದ್ರವನ್ನು ಸೇರದೆ ಇರಬಹುದು. ಅಥವಾ ಸಮುದ್ರವನ್ನು ಸೇರುವ ಮೊದಲು ಇನ್ನೆಲ್ಲೆಲ್ಲೋ ಸುತ್ತಿ, ಕುಡಿವ ಬಟ್ಟಲಿನಿಂದ ಹಿಡಿದು, ಜೀವಿಗಳ ಹೊಟ್ಟೆ, ಚರಂಡಿಯವರೆಗೂ ಹೆಣಗಿ, ಹಬೆಯಾಗಿ ಮೋಡವಾಗಿ ಮತ್ತೆ ಮಳೆಯಾಗಿ ಹರಿವಿನ ಭಾಗವಾಗುತ್ತ ಪಾಡು ಪಡಬೇಕಾಗಬಹುದು ಹರಿವಿನ ಭಾಗವಾಗದೆ ಜಂಗಮ ಎಂಬುದಕ್ಕೆ ಅರ್ಥವಿಲ್ಲ.

ಅರ್ಥ! ಅರ್ಥವೆನ್ನುವುದು ಹರಿವನ್ನು ಸ್ಥಗಿತಗೊಳಿಸುವ ಕೆಲಸ! ನದಿಗೆ ಹೆಸರಿಟ್ಟ ತಕ್ಷಣ ಅರ್ಥವಾಗುತ್ತದೆ, ಅನುಭವವಾಗುವುದಿಲ್ಲ. ನಮ್ಮ ಮೈಯಲ್ಲೂ ಸಾವಿರಾರು ಮೈಲುದ್ದದ ಹರಿವಿನ ದಾರಿಯಲ್ಲಿ ನಾವು ಬದುಕಿರುವಷ್ಟೂ ಕಾಲ ರಕ್ತಕಣಗಳು ಜಂಗಮವಾಗಿ ಸುತ್ತುತ್ತಲೇ ಇರುತ್ತವಲ್ಲಾ! ಅದಕ್ಕೆ ಮೈಯ ಕಟ್ಟು, ಮನಸಿನ ಕಟ್ಟು, ಬುದ್ಧಿಯ ಕಟ್ಟು ಹಾಗಿ ಜಂಗಮತ್ವವನ್ನು ಕಳೆದು ನಾನತ್ವವೆಂಬ ಗಟ್ಟಿಯನ್ನು ಮಾಡಿಟ್ಟುಕೊಳ್ಳುತ್ತೇವೆ

ಜಂಗಮವೆಂಬುದು ಬದುಕು. ಜಂಗಮವಾಗಿರದಿದ್ದರೆ ಸ್ಥಾವರಗೊಂಡರೆ ಸಾವು. ಇದು ವಿಚಾರದ ಮಾತಲ್ಲ. ಆಯಾ ಕ್ಷಣದ ಹರಿವಿನ ಅನುಭವದ ಮಾತು. ಹೊಳೆಯನ್ನು ನೋಡುತ್ತ ಕೂತರೆ ಅಗೋ ಆ ಕಲ್ಲನ್ನು ಸುತ್ತಿ ಬಳಸಿ ಒಂದಿಷ್ಟು ಧುಮುಕಿ ಹರಿಯುವ ನೀರಿನಲ್ಲೂ ವಿನ್ಯಾಸ ಕಾಣುತ್ತದೆ. ಕಾಣುತ್ತಿದ್ದ ಹಾಗೇ ಇಲ್ಲವಾಗುತ್ತದೆ. ಒಂದೇ ಥರ ಅನಿಸಿದರೂ ಕ್ಷಣಾರ್ಧ ಕ್ಷಣಾರ್ಧದಲ್ಲೂ ಹೊಸತಾಗುತ್ತಲೇ ಇರುತ್ತದೆ. ಇದನ್ನು ಅನುಭವಿಸಬೇಕೇ ಹೊರತು ವಿವರಿಸಿ ಅರ್ಥೈಸಲುಬಾರದು.

ನದಿ, ನಮ್ಮೊಳಗಿನ ರಕ್ತದ ಹರಿವು, ಕ್ಷಣ ಕ್ಷಣವೂ ಬದಲಾಗುವ ಭಾವಗಳ ಹರಿವು ಎಷ್ಟೊಂದು ಜಂಗಮಗಳು! ವಿಚಾರವೆಂಬುದು ಅನುಭವಕ್ಕೆ ಕಟ್ಟು ಹಾಕಿ ಆ ಕಟ್ಟಿನಾಚೆಗೆ ಇರುವುದೆಲ್ಲ ಸುಳ್ಳು, ಅಮುಖ್ಯ ಅನ್ನುತ್ತದೆ. ಅನುಭವ ಮಾತ್ರ ಇಂಥ ವಿಚಾರವೇ ಸರಿಯಲ್ಲ ಅನ್ನುತ್ತದೆ. ಯಾವ ವಿವರಣೆಯೂ ಯಾವ ಸಿದ್ಧಾಂತವೂ ಯಾವ ಆಚರಣೆಯೂ ಬದುಕಿನ ಹರಿವನ್ನು ವಿವರಿಸಲಾರದು. ಹಾಗೆ ವಿಚಾರ ಮುಖ್ಯವೆಂದುಕೊಂಡ ತಕ್ಷಣ ಜಂಗಮ ಇಲ್ಲವಾಗಿ ಮರಣ ಇರುತ್ತದೆ.

ವಿಚಾರವೆಂಬುದು ಸಂದೇಹಕ್ಕೆ ಒಳಗು. ವಚನಗಳ ದೊಡ್ಡ ಕ್ರಾಂತಿಯೆಂದರೆ ವಿಚಾರದ ಪ್ರಾಧಾನ್ಯವನ್ನು ಅಲ್ಲಗಳೆದು ಅನುಭವವನ್ನು ಪ್ರಮಾಣವೆಂದದ್ದು. ಯಾಗ, ಯಜ್ಞ, ಬಲಿ, ನೂರೆಂಟು ಆಚರಣೆಗಳು ಇವೆಲ್ಲವೂ ವಿಚಾರವು ಜೀವದ ಹರಿವಿಗೆ ಹಾಕಿದ ಕಟ್ಟುಗಳು. ಅದನ್ನು ಮೀರುವುದೆಂದರೆ ಕ್ಷಣಕ್ಷಣದ ಹರಿವಿನ ಅನುಭವಕ್ಕೆ ಒಡ್ಡಿಕೊಳ್ಳುವುದೇ ಇರಬೇಕು.

ನೆನಪು, ನೆನಪಿನಿಂದ ಮೂಡಿಸಿಕೊಂಡ ಗುರುತು, ನೆನಪು, ಗುರುತುಗಳನ್ನು ಇನ್ನೊಬ್ಬರಿಗೆ ತಿಳಿಸಿಕೊಡಲು ಕಟ್ಟಿಕೊಂಡ ಭಾಷೆ ಇವೆಲ್ಲವೂ ವಿಚಾರವನ್ನೆ ಆಧರಿಸಿದ ಕಟ್ಟುಪಾಡುಗಳು. ಅರಿವು ಇರಬೇಕು, ಆದರೆ ಅರಿತದ್ದು ನೆನಪಾಗಿ ಉಳಿಯಬಾರದು. ಕುರುಹು ಇರಬೇಕು ಆದರೆ ಅದು ಬರಿಯ ಗುರುತು ಮಾತ್ರ, ಅಷ್ಟೊಂದು ಮುಖ್ಯವಲ್ಲ ಅನ್ನುವುದೇ ನಿಜ, ನುಡಿ ಅನ್ನುವುದು ಸಾವಿರಾರು ವರ್ಷಗಳ ಕಾಲ ರೂಪುಗೊಂಡ ಅರ್ಥಗಳ ದೊಡ್ಡ ರಾಶಿಯಾಗಿ ಅನುಭವದ ಬದಲಾಗಿ ಅದನ್ನು ಹೇಳಲು ಬಯಸುವ ಪದದ ಬಗ್ಗೆಯೇ ಜಗಳ ಹುಟ್ಟಿಸುವ ಇನ್ನೊಂದು ಸ್ಥಾವರ.

ಅರ್ಥವಿರುವ ಹಾಗೆ ಮಾತಾಡಿಯೂ ಅರ್ಥದ ಹಂಗನ್ನು ಮೀರುವ, ಕುರುಹು ಇದ್ದರೂ ಅದನ್ನು ಧಿಕ್ಕರಿಸುವ ಧೈರ್ಯ ಮಾಡುವ. ನೆನಪು ಇದ್ದರೂ ಅದರ ಪುನರುಕ್ತಿಯನ್ನು ಆಶಿಸದ ಹರಿವಿನೊಳಗೆ ಒಂದಾಗುವ ಕೆಲಸವೇ ವ್ಯಕ್ತಿಯ ಬದುಕಿನ ರೀತಿ ಇದ್ದೀತು. ಇದನ್ನು ಕಂಡು ಅನುಭವಕ್ಕೆ ತಂದುಕೊಂಡು ಮಾತಾಡದೆಯೂ ತಿಳಿಸುವುದಕ್ಕೆ ಸಾಧ್ಯವೇ?

ನದಿಯಲ್ಲಿ ಹರಿದು ಹೋಗುತ್ತಿರುವ ನೀರಿನ ಕಣ ಹೋಗುತ್ತಿರುತ್ತದೋ ಇದ್ದಲ್ಲೇ ಇರುತ್ತದೋ ಹರಿವಿನಲ್ಲಿ ಒಂದಾಗಿ ಸುಮ್ಮನೆ ಇರುತ್ತದೋ? ಹಾಗೆ ಜಂಗಮನದೂ ಗಮನವಿಲ್ಲದ ಗಮನ, ನಿರ್-ಗಮನ. ಅರ್ಥಕ್ಕೆ, ತರ್ಕಕ್ಕೆ, ಗೆಲುವಿನ ಹಂಬಲಕ್ಕೆ ಗಂಟುಬಿದ್ದ ಭಾಷೆ ಸೂತಕ. ಮಾತಾಡಿದರೂ ಮಾತಾಡಲಿಲ್ಲ ಅನ್ನುವ ಹಾಗೆ, ಮಾತಾಡದಿದ್ದರೂ ತಿಳಿಯಿತು ಅನ್ನಿಸುವ ಹಾಗೆ ಮಾಡುವ ಸಮರ್ಥ ನುಡಿದು ಸೂತಕಿಯಾಗದ ಜಂಗಮ.

ಇಡೀ ಬದುಕು, ಬದುಕಿರುವ ಒಂದೊಂದೂ ಜೀವ, ಜೀವದ ದೇಹದೊಳಗಿನ ಒಂದೊಂದೂ ರಕ್ತಕಣ, ಮನಸಿನ ಒಂದೊಂದೂ ಭಾವ, ಆಲೋಚನೆ, ಎಲ್ಲವೂ ಜಂಗಮವೇ, ಹರಿವೇ. ಅದನ್ನು ಅರಿವಿಗೆ ತಂದುಕೊಂಡಾಗ ಜಂಗಮವಲ್ಲದ ಜೀವ ಒಂದೂ ಇರುವುದಿಲ್ಲ. ಜಂಗಮ ಚಲನೆಗೆ ಆದಿಯೂ ಇಲ್ಲ, ಅಂತ್ಯವೂ ಇಲ್ಲ.

●

*ನಂ.೪೪೫, ಆನಂದ ನಿಲಯ, ೮ನೆಯ ಮೇನ್, ಸರಸ್ವತಿಪುರಂ, ಮೈಸೂರು – ೫೭೦ ೦೦೯*

*ಮೊ: ೯೪೮೦೩ ೭೯೮೩೭*



# ವಚನ ರಸಪ್ರಶ್ನೆ ಸ್ಪರ್ಧೆ

## ವಚನ ರಸಪ್ರಶ್ನೆ~೨೨ರ ಸರಿಯುತ್ತರಗಳು

೧. (ಆ) ಕರುಳಕೇತಯ್ಯ ೨. (ಅ) ಫ.ಗು. ಹಳಕಟ್ಟಿ ೩.ಈ) ಜೇಡರ ದಾಸಿಮಯ್ಯ ೪.ಈ) ಐಹಿಘಟದೂರ ರಾಮೇಶ್ವರಲಿಂಗ ೫.ಅ) ವಚನಗಳಲ್ಲಿ ಗಣಿತ

'ಮಹಾಮನೆ'ಯ ಹಲವಾರು ಓದುಗರು "ವಚನ ರಸಪ್ರಶ್ನೆ-೨೨"ರ ಉತ್ತರಗಳನ್ನು ಕಳಿಸಿದ್ದಾರೆ. ಅವುಗಳಲ್ಲಿ ಲಾಟರಿ ಎತ್ತುವ ಮೂಲಕ ಆಯ್ಕೆಯಾದ ಇಬ್ಬರು ವಿಜೇತರ ಹೆಸರುಗಳು ಇಂತಿವೆ.

೧. ಶ್ರೀಮತಿ ಮಂಜುಳಾ, ಬೆಂಗಳೂರು
೨. ಶ್ರೀ ಗುರುಪ್ರಸಾದ್ ಕೆ. ಬೆಂಗಳೂರು

## ವಚನ ರಸಪ್ರಶ್ನೆ ~೨೩ರ ಪ್ರಶ್ನೆಗಳು

೧. 'ವಚನ ವರ್ಷ' – ಕೃತಿಯ ಸಂಪಾದಕರು:
(ಅ) ಶಿ.ಶಿ. ಬಸವನಾಳ (ಆ) ಎಲ್. ಬಸವರಾಜು
(ಇ) ಡಾ.ಎಂ.ಎಂ. ಕಲಬುರ್ಗಿ (ಈ) ಡಾ.ಎಸ್.ಜಿ. ಸಿದ್ಧರಾಮಯ್ಯ

೨. 'ನಿಂಬೇಶ್ವರಾ' ಎನ್ನುವುದು ಯಾರ ಅಂಕಿತ ವಚನ?
(ಅ) ಮಹಾದೇವಿಯಕ್ಕ (ಆ) ಆದಯ್ಯ
(ಇ) ಬತ್ತಲೇಶ್ವರನ ಪುಣ್ಯಸ್ತ್ರೀ ಗುಡ್ಡವ್ವೆ (ಈ) ಅಕ್ಕಮ್ಮ

೩. ನನಗೆ ನಾನೇ ಗುರುವಾದೆನಯ್ಯ– ಎನ್ನುವ ಸಾಲು ಯಾರ ವಚನದಲ್ಲಿ ಬರುತ್ತದೆ?
(ಅ) ಅಮುಗೆ ದೇವಯ್ಯ (ಆ) ಬಹುರೂಪಿ ಚೌಡಯ್ಯ
(ಇ) ದಾಸೋಹದ ಸಂಗಣ್ಣ (ಈ) ಚಂದಿಮರಸ

೪. "ಸದಾಶಿವ ಮೂರ್ತಿಲಿಂಗ" ಯಾರ ಅಂಕಿತ?
(ಅ) ಅರಿವಿನ ಮಾರಿತಂದೆ (ಆ) ಅಮುಗೆ ರಾಯಮ್ಮ
(ಇ) ಆಯ್ದಕ್ಕಿ ಲಕ್ಕಮ್ಮ (ಈ) ನಾಗಲಾಂಬಿಕೆ

೫. ಅಡಗು ಎನ್ನುವ ಪದದ ಅರ್ಥ?
(ಅ) ಬಚ್ಚಿಟ್ಟುಕೊಳ್ಳುವುದು (ಆ) ವಾಹನ
(ಇ) ಅಂಕಿತನಾಮ (ಈ) ಮಾಂಸ

ಈ ಐದೂ ಪ್ರಶ್ನೆಗಳಿಗೆ ಸರಿಯಾದ ಉತ್ತರಗಳನ್ನು ಬರೆದು ಅಂಚೆಯ ಮೂಲಕ ಮಾತ್ರ ಕಳಿಸಬೇಕು. ಐದೂ ಉತ್ತರಗಳು ಸರಿಯಾಗಿರುವ ಪತ್ರಗಳನ್ನು ಮಾತ್ರ ಸ್ಪರ್ಧೆಗೆ ಪರಿಗಣಿಸಲಾಗುವುದು. ಇಂಥ ಪತ್ರಗಳಲ್ಲಿ ಲಾಟರಿಯ ಮೂಲಕ ಇಬ್ಬರ ಉತ್ತರಗಳನ್ನು ಆಯ್ದು, ಅವರಿಗೆ ಪುಸ್ತಕ ರೂಪದಲ್ಲಿ ಬಹುಮಾನವನ್ನು ಕಳಿಸಲಾಗುವುದು. ನಿಮ್ಮ ಉತ್ತರಗಳು ಬರಲು ಪ್ರತಿ ತಿಂಗಳ ೨೦ನೆಯ ದಿನಾಂಕವು ಕೊನೆಯದಾಗಿರುತ್ತದೆ.

**ಅಂಚೆಯ ಮೂಲಕ ಮಾತ್ರ ನಿಮ್ಮ ಉತ್ತರಗಳು ತಲುಪಬೇಕಾದ ವಿಳಾಸ**

ಅಧ್ಯಕ್ಷರು, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, "ವಚನ ರಸಪ್ರಶ್ನೆ", ೧ನೆಯ ಮುಖ್ಯರಸ್ತೆ, ಜಗದ್ಗುರು ಶ್ರೀ ಶಿವರಾತ್ರೀಶ್ವರ ವೃತ್ತ, ೮ನೆಯ ವಿಭಾಗ, ಜಯನಗರ, ಬೆಂಗಳೂರು–೫೬೦೦೭೦.

# ಸಂವಿಧಾನಬದ್ಧ ಸಂತ
# ಲಿಂ. ನ್ಯಾಯಮೂರ್ತಿ ಡಿ.ಎಂ. ಚಂದ್ರಶೇಖರ್

**ಗೊ.ರು. ಚನ್ನಬಸಪ್ಪ**

"ಮಹಾಪುರುಷರ ಜೀವನದಿಂದ ನಮ್ಮ ಜೀವನವೂ ಮಹೋನ್ನತವಾಗಬಹುದು. ನಮ್ಮನ್ನು ಆಗಲಿದವರು ತಮ್ಮ ಕಾಲದ ಮರಳಿನ ಮೇಲೆ ನಡೆದು ತಮ್ಮ ಹೆಜ್ಜೆಗುರುತುಗಳನ್ನು ಬಿಟ್ಟುಹೋಗಿರುತ್ತಾರೆ" ವಿಶ್ವ ಪ್ರಸಿದ್ಧ ಕವಿ ಎಚ್.ಡಬ್ಲ್ಯೂ. ಲಾಂಗ್‌ಫೆಲೋ ಅವರ ಈ ನುಡಿಗಳು, ನಮ್ಮ ಮಧ್ಯೆಯೇ ಇದ್ದು, ಇಲ್ಲಿಗೆ ಹದಿನೇಳು ವರ್ಷಗಳ ಹಿಂದೆ ನಮ್ಮನ್ನಗಲಿದ ನ್ಯಾಯಮೂರ್ತಿ ಡಿ.ಎಂ. ಚಂದ್ರಶೇಖರ್ ಅವರನ್ನು ನೆನಪಿಗೆ ತರುತ್ತವೆ. ಅವರು ಬದುಕಿದ್ದಿದ್ದರೆ ಈಗ 'ಶತಾಯುಷಿ' ಎನಿಸಿಕೊಳ್ಳುತ್ತಿದ್ದರು. ಅವರ ಜನ್ಮದಿನದ (೨೬.೦೯.೧೯೨೦) ಶತಮಾನೋತ್ಸವದ ಸ್ಮರಣೆ ಈ ಬರಹ.

ತಮ್ಮ ಅಂತ್ಯಕ್ಕೆ ೧೩ ವರ್ಷಗಳ ಹಿಂದೆಯೇ ಅವರು ಬರೆದಿಟ್ಟಿದ್ದ ಉಯಿಲಿನಲ್ಲಿ 'ನನ್ನ ನಿಧನವಾದಾಗ ಕಣ್ಣುಗಳನ್ನು ಕಣ್ಣಾಸ್ಪತ್ರೆಗೆ ಕೊಡಿ. ನನ್ನ ದೇಹವನ್ನು ವೈದ್ಯಕೀಯ ಆಸ್ಪತ್ರೆಗೆ ಒಪ್ಪಿಸಿ. ನನಗಾಗಿ ಶ್ರದ್ಧಾಂಜಲಿ, ಪುಣ್ಯತಿಥಿ ಇತ್ಯಾದಿಗಳು ಬೇಡ. ಅದಕ್ಕಾಗಿ ಮಾಡುವ ವೆಚ್ಚದ ಹಣವನ್ನು ಅನಾಥಾಲಯದ ಮಕ್ಕಳ ಕ್ಷೇಮಕ್ಕೆ ಬಳಸಿ. ನನಗಾಗಿ ಯಾವುದೇ ರೀತಿಯ ಸ್ಮಾರಕ ಬೇಡ. ನನ್ನ ನಿಧನದ ಸುದ್ದಿಯ ಪ್ರಚಾರದ ಅಗತ್ಯವಿಲ್ಲ' ಎಂದು ತಿಳಿಸಿದ್ದ ಶರಣ ಚೇತನದ ಕ್ಷಮೆ ಕೋರಿ ಈ ಸ್ಮರಣೆ.

ನಾವು ಲಿಂ. ಡಿ.ಎಂ. ಚಂದ್ರಶೇಖರ್ ಅವರನ್ನು ನೆನೆಯಬೇಕಾದದ್ದು ಅವರು ಆಗರ್ಭ ಶ್ರೀಮಂತ ಕುಟುಂಬದಲ್ಲಿ ಹುಟ್ಟಿದವರೆಂಬ ಕಾರಣಕ್ಕಲ್ಲ; ಅವರು ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರಾಗಿದ್ದರೆಂಬುದಕ್ಕೂ ಅಲ್ಲ. ಅದಕ್ಕಿಂತ ಮಿಗಿಲಾದ ಅವರ ಸರಳ ಬದುಕಿಗಾಗಿ, ಸ್ವಾತಂತ್ರ್ಯ ಪ್ರೇಮಕ್ಕಾಗಿ, ರಾಷ್ಟ್ರಭಕ್ತಿಗಾಗಿ, ನ್ಯಾಯನಿಷ್ಠೆಗಾಗಿ, ಸಾಮಾಜಿಕ ಕಳಕಳಿಗಾಗಿ, ನೊಂದವರ ಬಗೆಗೆ ಅವರಿಗಿದ್ದ ಅನುಕಂಪಕ್ಕಾಗಿ, ಕಾಯಕ-ದಾಸೋಹಗಳ ನೀತಿಗಾಗಿ, ಸದುವಿನಯದ ಸಂಪನ್ನತೆಗಾಗಿ, ಸ್ನೇಹ ಸೌಹಾರ್ದಕ್ಕಾಗಿ, ಸ್ವಹಿತ ಮೀರಿದ ಅವರ ಸಮಷ್ಟಿ ಚಿಂತನಕ್ಕಾಗಿ.

ಏನಿದ್ದರೂ, ಅವರು ಎಲ್ಲರಿಗೂ ಬಲ್ಲವರಾಗಿದ್ದು ನ್ಯಾಯಮೂರ್ತಿಗಳಾಗಿಯೇ. ಅವರು ೨೦ ವರ್ಷಗಳ ಕಾಲ ನ್ಯಾಯಾಂಗದ ಸೇವೆ ಸಲ್ಲಿಸಿದ್ದರೆ, ಸೇವೆಯಿಂದ ನಿವೃತ್ತರಾದನಂತರ ೨೦ ವರ್ಷ ಸಮಾಜ ಸೇವೆ ಸಲ್ಲಿಸಿದರು. ನ್ಯಾಯವಾದಿಗಳಾಗಿ ಪ್ರತಿಜ್ಞೆ ಸ್ವೀಕರಿಸಿದಂದಿನಿಂದ ಸೇವಾಂತ್ಯದವರೆಗೂ ನ್ಯಾಯಾಂಗದ ಘನತೆ-ಗೌರವಗಳನ್ನು ರಕ್ಷಿಸಿಕೊಂಡು ಬಂದು, ಸಾಮಾಜಿಕ ಸೇವೆಯಲ್ಲಿ ಮಾಡಿದೆನೆಂಬುದು ಮನದಲಿ ಹೊಳೆಯದಂತೆ ನೋಡಿಕೊಂಡವರು.



ನ್ಯಾಯಶಾಸ್ತ್ರಜ್ಞ ಫಾಲಿ ಎಸ್. ನಾರಿಮನ್ ಹೇಳಿರುವ ಒಂದು ಮಾತಿದೆ: "A judgement must have social philosophy and human approach to legal problem" ಈ ಮಾತಿಗೆ ಅನ್ವರ್ಥವಾಗಿದ್ದವರು ಡಿ.ಎಂ. ಚಂದ್ರಶೇಖರ್ ಅವರು. ಡಿ.ಎಂ.ಸಿ. ಅವರು ಶ್ರೇಷ್ಠ ನ್ಯಾಯಮೂರ್ತಿಗಳಾಗಿದ್ದರು. ವೈಯಕ್ತಿಕವಾಗಿ ಕರ್ತವ್ಯನಿಷ್ಠೆಗೆ, ಪ್ರಾಮಾಣಿಕತೆಗೆ, ಉದಾತ್ತ ಚಿಂತನೆಗೆ, ಸದ್ದಿಲ್ಲದೆ ಸೇವೆಗೆ ಬರೆದ ವ್ಯಾಖ್ಯಾನವಾಗಿದ್ದವರು; ಬಸವಣ್ಣನವರ ವಿಚಾರಧಾರೆಗೆ ಶರಣರಾಗಿದ್ದವರು.

ನಮ್ಮ ದೇಶದಲ್ಲಿ ಸ್ವಾತಂತ್ರ್ಯಾನಂತರ ಸರ್ಕಾರಿ ಮತ್ತು ಖಾಸಗಿ ಕ್ಷೇತ್ರಗಳ ಸೇವೆಯಿಂದ ನಿವೃತ್ತರಾದವರ ಸಂಖ್ಯೆ ಲಕ್ಷ ಲಕ್ಷಾಂತರವಿರಬಹುದು. ಆದರೆ ಡಿ.ಎಂ.ಸಿ ಅವರಂತೆ ಉಸಿರಿರುವವರೆಗೂ ಜನಸೇವೆ ಸಲ್ಲಿಸಿದವರು ವಿರಳರೆಂದೇ ಹೇಳಬೇಕು. ಡಿ.ಎಂ.ಸಿ ಅವರು ಸಹಸ್ರಾರು ಅನಾಥರು, ಅಂಗನ್ಯೂನರು, ಅವಕಾಶವಂಚಿತರ ಬದುಕಿನಲ್ಲಿ ಭರವಸೆಯ ಬೆಳಕು ಮೂಡಿಸಿದವರು. ನಿವೃತ್ತರಿಗೆಲ್ಲ ನಿದರ್ಶನವಾಗಿದ್ದವರು.

ರಾಜಕೀಯ ವ್ಯವಸ್ಥೆಯಲ್ಲಿ ಜನಜೀವನಕ್ಕೆ ನೆಮ್ಮದಿ ದೊರಕುವುದು ಕಷ್ಟವೆಂದು ಅರಿತಿದ್ದ ಡಿ.ಎಂ.ಸಿ ಅವರು, ಸ್ವಯಂ-ಸೇವಾ ಸಂಸ್ಥೆಗಳತ್ತ ಹೆಚ್ಚು ಗಮನ ಹರಿಸಿದ್ದರು. ಅಂತಹ ಅನೇಕ ಸಂಸ್ಥೆಗಳ ಸ್ಥಾಪಕರಾಗಿ, ಉತ್ತೇಜಕರಾಗಿ, ಪೋಷಕರಾಗಿ, ಮಾರ್ಗದರ್ಶಕರಾಗಿ ಸೇವೆ ಸಲ್ಲಿಸಿದರು. ರಾಜಕೀಯ ಏರು-ಪೇರುಗಳ ಬಗೆಗೆ ಅವರು ಎಂದೂ ತಲೆಕೆಡಿಸಿಕೊಳ್ಳಲಿಲ್ಲ. ಅವರ ಕಣ್ಣ ಮುಂದಿದ್ದುದೆಲ್ಲ ಜನಸೇವೆಯೊಂದೇ.

ನ್ಯಾಯಾಧೀಶರಾಗಿ ಡಿ.ಎಂ.ಸಿ ಅವರು ಎಷ್ಟೋ ತೀರ್ಪುಗಳನ್ನು ನೀಡಿರಬಹುದು. ಆದರೆ, ಸ್ವತಂತ್ರ ಭಾರತದ ಇತಿಹಾಸದಲ್ಲೇ ಒಂದು ದಾಖಲೆ ಎನಿಸುವಂತೆ ಅವರು ನೀಡಿದ ಒಂದು ತೀರ್ಪೆಂದರೆ, ನಮ್ಮ ಪ್ರಜಾಪ್ರಭುತ್ವಕ್ಕೇ ಕಳಂಕ ತಂದಿದ್ದ ೧೯೭೫ರ ತುರ್ತುಪರಿಸ್ಥಿತಿ ಸಂದರ್ಭದಲ್ಲಿ ನೀಡಿದ ತೀರ್ಪು. ಸಂವಿಧಾನದ ೨೧-೨೨ನೆಯ ನಿಬಂಧನೆಯ ಮೂಲಭೂತ ಹಕ್ಕುಗಳನ್ನು ರದ್ದುಪಡಿಸಿ ರಾಷ್ಟ್ರಪತಿಗಳು ಆಜ್ಞೆ ಹೊರಡಿಸಿದ್ದರೂ, 'ನ್ಯಾಯಾಲಯವು ಸಾರ್ವಜನಿಕ ಸ್ಥಾನಬದ್ಧತೆಯು ಸಂವಿಧಾನ ಬದ್ಧತೆಯನ್ನು ಪರಿಶೀಲಿಸಬಹುದೆಂದು ಹೇಳಿ, ತುರ್ತುಪರಿಸ್ಥಿತಿಯಲ್ಲೂ ಸಹ ವ್ಯಕ್ತಿಸ್ವಾತಂತ್ರ್ಯದ ಮೂಲಭೂತ ಹಕ್ಕುಗಳನ್ನು ನಿರಾಕರಿಸುವಂತಿಲ್ಲ' ಎಂಬ ದಿಟ್ಟ ತೀರ್ಪನ್ನು ನೀಡಿ, ಇಡೀ ರಾಷ್ಟ್ರದ ಗಮನ ಸೆಳೆದರು. ಅಂದಿನ ಕೇಂದ್ರ ಸರ್ಕಾರ ಒಂದು ರೀತಿಯ ಸೇಡೆಂಬಂತೆ ಅವರನ್ನು ಅಲಹಾಬಾದ್ ಉಚ್ಚನ್ಯಾಯಾಲಯಕ್ಕೆ ವರ್ಗಾಯಿಸಿದರೂ ಅವರು ಆ ಬಗೆಗೆ ಚಿಂತಿಸಲಿಲ್ಲ.

ಡಿ.ಎಂ.ಸಿ ಅವರ ದಿಟ್ಟತನ ಮತ್ತು ಸ್ವಾಭಿಮಾನಕ್ಕೆ ಸಾಕ್ಷಿ ಹೇಳುವ ಒಂದು ಪ್ರಸಂಗವಿದೆ. ಅವರು ಕರ್ನಾಟಕ ಉಚ್ಚನ್ಯಾಯಾಲಯದ ನ್ಯಾಯಾಧೀಶರಾಗಿದ್ದಾಗ ನ್ಯಾಯಮೂರ್ತಿ ಗೋವಿಂದ ಭಟ್ ಅವರು ಮುಖ್ಯ ನ್ಯಾಯಾಧೀಶರಾಗಿದ್ದರು. ಆಗ ಒಮ್ಮೆ ಭೇಟಿ ನೀಡಿದ ಭಾರತದ ಸರ್ವೋಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರಾಗಿದ್ದ ನ್ಯಾಯಮೂರ್ತಿ ಎ.ಎನ್. ರಾಯ್ ಅವರು, ಇಲ್ಲಿನ ಉಚ್ಚನ್ಯಾಯಾಲಯದ ನಡವಳಿಕೆಗಳನ್ನು ವೇದಿಕೆಯ ಮೇಲೆ ಕುಳಿತು ವೀಕ್ಷಿಸಲು ವ್ಯವಸ್ಥೆ ಮಾಡಬೇಕೆಂದು ಸೂಚನೆ ನೀಡಿದರು. ಅದಕ್ಕೆ ಇಲ್ಲಿನ ಪೂರ್ಣಪೀಠ ವಿರೋಧ ವ್ಯಕ್ತಪಡಿಸಿತು. ಅವರಿಗೆ ಚಹಾಕೂಟ ಏರ್ಪಡಿಸಿದಾಗ, ನ್ಯಾ. ರಾಯ್ ಅವರು ತಮ್ಮ ಸೂಚನೆಯನ್ನು ವಿರೋಧಿಸಿದ್ದೇಕೆ? ಎಂದು ಕೇಳುತ್ತಾರೆ. ಆಗ ಡಿ.ಎಂ.ಸಿ ಅವರು 'ಸಂವಿಧಾನದ ಪ್ರಕಾರ, ಉಚ್ಚ ನ್ಯಾಯಾಲಯಗಳು ಸರ್ವೋಚ್ಚ ನ್ಯಾಯಾಲಯದ

ಆಡಳಿತಾಧೀನವಲ್ಲ. ಆದ್ದರಿಂದ ನೀವು ವೇದಿಕೆ ಮೇಲೆ ಕೂರುವುದು ತಪ್ಪು ಸಂದೇಶವನ್ನು ಒಯ್ಯುತ್ತದೆ' ಎಂದರು. ಆಗ ನ್ಯಾ. ರಾಯ್ ಅವರು 'ಉಚ್ಚನ್ಯಾಯಾಲಯಗಳ ತೀರ್ಪುಗಳನ್ನು ರದ್ದುಗೊಳಿಸುವ ಅಧಿಕಾರ ಸರ್ವೋಚ್ಚ ನ್ಯಾಯಾಲಯಕ್ಕಿದೆ. ಅಷ್ಟೇ ಅಲ್ಲ, ಉಚ್ಚನ್ಯಾಯಾಲಯಕ್ಕೆ ನ್ಯಾಯಾಧೀಶರ ನೇಮಕಕ್ಕೆ ನಾವೇ ಶಿಫಾರಸು ಮಾಡಬೇಕು' ಎನ್ನುತ್ತಾರೆ. ಅದಕ್ಕೆ ಡಿ.ಎಂ.ಸಿ ಅವರು 'ನಮಗೆ ಸುಪ್ರೀಂ ಕೋರ್ಟ್ ಜಡ್ಜ್ ಆಗುವ ಇಚ್ಛೆಯೇನೂ ಇಲ್ಲ. ಆದರೆ ನಮಗೆ ಮುಖ್ಯವಾದದ್ದು ರಾಜ್ಯವೊಂದರ ಉಚ್ಚನ್ಯಾಯಾಲಯದ ಘನತೆ-ಗೌರವಗಳ ರಕ್ಷಣೆ' ಎಂದು ನೇರವಾಗಿ ಹೇಳುತ್ತಾರೆ.

ಡಿ.ಎಂ.ಸಿ ಅವರದು ಅಸಾಧಾರಣ ವ್ಯಕ್ತಿತ್ವ. ನ್ಯಾಯಾಂಗದಂತೆಯೇ ಸಾಮಾಜಿಕ ಮತ್ತು ಸಾಂಸ್ಕೃತಿಕ ಕ್ಷೇತ್ರದ ಬಗೆಗೂ ಅಪಾರ ಶ್ರದ್ಧಾಸಕ್ತಿ ಇಟ್ಟುಕೊಂಡಿದ್ದರು. ಅವರು ಒಳ್ಳೆಯ ಲೇಖಕರೂ ಆಗಿದ್ದರು. ಸಮಾಜಸೇವೆ, ದಾನ-ಧರ್ಮಕಾರ್ಯ, ಕಾಯಕ-ದಾಸೋಹ, ಆರೋಗ್ಯ, ಯೋಗ, ಪ್ರಕೃತಿ ಚಿಕಿತ್ಸೆ, ಸ್ವದೇಶಿ ಚಳವಳಿ, ಅರಣ್ಯ ಸಂರಕ್ಷಣೆ, ಮಾನವ ಹಕ್ಕುಗಳು, ಸಂವಿಧಾನ, ಶಾಸಕಾಂಗ-ನ್ಯಾಯಾಂಗ – ಹೀಗೆ ರಾಷ್ಟ್ರೀಯ ಮಹತ್ವದ ಅನೇಕ ವಿಷಯಗಳನ್ನು ಕುರಿತು ಲೇಖನಗಳನ್ನು ಬರೆದಿದ್ದಾರೆ. ಅನೇಕ ವೇದಿಕೆಗಳಲ್ಲಿ ವಿಚಾರಪೂರ್ಣವಾಗಿ ಮಾತನಾಡಿದ್ದಾರೆ. 'ಜನಜಾಗೃತಿ ಉಂಟಾದರೆ ಉಳಿದೆಲ್ಲ ಅಭಿವೃದ್ಧಿ ಸುಗಮವಾಗುತ್ತದೆ' ಎಂಬುದು ಅವರ ದೃಢ ನಂಬಿಕೆಯಾಗಿತ್ತು.

ನಮಗೆ ಸ್ವಾತಂತ್ರ್ಯ ಬಂದು ಎಪ್ಪತ್ತು ವರ್ಷಗಳಾದರೂ ನ್ಯಾಯಾಂಗ-ಕಾರ್ಯಾಂಗಗಳ ವ್ಯಾಪ್ತಿ ವಿವಾದ; ಅಭಿವ್ಯಕ್ತಿ ಸ್ವಾತಂತ್ರ್ಯದ ಇತಿ-ಮಿತಿ, ರಾಜ್ಯ-ಕೇಂದ್ರಗಳ ಸಂಬಂಧ, ಪ್ರಜೆಗಳ ಹಕ್ಕು-ಬಾಧ್ಯತೆ, ಜನಪ್ರತಿನಿಧಿಗಳ ಹೊಣೆಗಾರಿಕೆ ಇತ್ಯಾದಿ ಸಂವಿಧಾನಪ್ರಣೀತ ಸಂಗತಿಗಳು ಇನ್ನೂ ಗೊಂದಲದ ಗೂಡಾಗಿವೆ ಎಂಬುದಕ್ಕೆ ಪ್ರಚಲಿತ ವಿದ್ಯಮಾನಗಳೇ ಸಾಕ್ಷಿಯಾಗಿವೆ.

ಇಂದು ನಮ್ಮ ಧಾರ್ಮಿಕ ಕ್ಷೇತ್ರ ತನ್ನ ಅಂತಃಸತ್ವವನ್ನು ಕಳೆದುಕೊಂಡಿದೆ. ರಾಜಕೀಯ ಕ್ಷೇತ್ರ ಕೇವಲ ಹಣ ಮತ್ತು ಅಧಿಕಾರದ ಹುಚ್ಚಿನಲ್ಲಿದೆ. ಶೈಕ್ಷಣಿಕ ಕ್ಷೇತ್ರ ಗೊತ್ತು-ಗುರಿಯಿಲ್ಲದೆ ಹೊಯ್ದಾಡುತ್ತಿದೆ. ಸಾಮಾಜಿಕ ಕ್ಷೇತ್ರ ಸಂಕುಚಿತತೆಯ ಸಂಕೋಲೆಯಲ್ಲಿ ಸಿಕ್ಕಿಕೊಂಡಿದೆ. ಇಂತಹ ಕಳವಳಕಾರಿ ಸನ್ನಿವೇಶದಲ್ಲಿ ಲಿಂ. ಡಿ.ಎಂ. ಚಂದ್ರಶೇಖರ್ ಅವರಂತಹ ರಾಷ್ಟ್ರೀಯ ದೃಷ್ಟಿಯ, ಸಮರ್ಪಣ ಸೇವಾಭಾವದ ಮತ್ತು ಸಂವಿಧಾನ ಬದ್ಧ ಶ್ರೇಷ್ಠರು ಬೇಕಾಗಿದ್ದಾರೆ.

ವಿಶ್ವಪ್ರಸಿದ್ಧ ಸಂತ ಜಲಾಲುದ್ದೀನ್ ರೂಮಿಯ ಒಂದು ಸೂಕ್ತಿಯಿದೆ: "ನೀನು ಈ ಜಗತ್ತನ್ನು ಬಿಡುವಾಗ ನಿನ್ನ ವಿಶ್ರಾಂತಿ ಸ್ಥಳವನ್ನು ನೆಲದಲ್ಲಿ ಹುಡುಕಬೇಡ, ಜನರ ಹೃದಯದಲ್ಲಿ ಕಂಡುಕೋ". ಆ ಸೂಕ್ತಿಯಂತೆ ಜನ-ಹೃದಯದಲ್ಲಿ ನೆಲೆಗೊಂಡವರು ಲಿಂ. ಡಿ.ಎಂ. ಚಂದ್ರಶೇಖರ್! ●

*೪೦೬, 'ಪ್ರಣಾಮ' ೩ನೇ ಕ್ರಾಸ್, 'ಎಫ್' ರಸ್ತೆ, ಐಡಿಯಲ್ ಹೋಮ್ ಟೌನ್‌ಷಿಪ್, ೨ನೇ ಹಂತ*
*ರಾಜರಾಜೇಶ್ವರಿ ನಗರ, ಬೆಂಗಳೂರು-೫೬೦ ೦೯೮ ಮೊ: ೯೮೮೦೫ ೧೨೫೮೯*

**ಹೊರಗನೆ ಕೊಯ್ದು ಹೊರಗನೆ ಪೂಜಿಸಿದವರ ಕಂಡು,**
**ನಾಚಿದೆ ನಾಚಿದೆನಯ್ಯಾ,**
**ಒಳಗೆ, ಒಂದು ಅನಿಮಿಷಲಿಂಗವ ಕಂಡು,**
**ಎನ್ನ ಮನೋಪುಷ್ಪದಲ್ಲಿ ಪೂಜಿಸಿದಡೆ**
**ನಾಚಿಕೆ ಮಾಡು ನಿಸ್ಸಂದೇಹಿಯಾದೆನು ಗುಹೇಶ್ವರಾ.**



## ಅಗಣಿತ

**ಡಾ. ಅಮರೇಶ ನುಗಡೋಣಿ**

**ಇಳೆ ನಿಮ್ಮ ದಾನ; ಬೆಳೆ ನಿಮ್ಮ ದಾನ**
**ಸುಳಿದು ಸೂಸುವ ವಾಯು ನಿಮ್ಮ ದಾನ**
**ನಿಮ್ಮ ದಾನವನುಂಡು ಅನ್ಯರ ಹೊಗಳುವ**
**ಕುನ್ನಿಗಳನೇನೆಂಬೆ, ರಾಮನಾಥ**
**– ಜೇಡರ ದಾಸಿಮಯ್ಯ**

ಭಕ್ತಿ ಪಂಥದಲ್ಲಿ ಕಾಣಿಸಿಕೊಂಡ ಜೇಡರ ದಾಸಿಮಯ್ಯ ಭಕ್ತನೂ ಹೌದು. ಶರಣನೂ ಹೌದು. ಭಕ್ತಿ ಚಳುವಳಿಯ ತತ್ವಗಳನ್ನು ಬಾಳಿದ ಈ ಶರಣ ವಚನಗಳನ್ನು ಬರೆದು, ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಮೊದಲ ವಚನಕಾರನೆಂದು ಹೆಸರು ಪಡೆದಿದ್ದಾನೆ. ವಚನ ಎಂಬ ಕಾವ್ಯ ರೂಪವನ್ನು ದಾಸಿಮಯ್ಯ ಎಲ್ಲಿಂದ ತಂದ? ಎಂಬ ಪ್ರಶ್ನೆಗೆ ಉತ್ತರ ಸಿಗದು. ವಿದ್ವಾಂಸರು ಹುಡುಕಿ ತಮ್ಮ ತಮ್ಮ ಚಿಂತನೆಗೆ ಅನುಗುಣವಾಗಿ ಉತ್ತರ ಕಂಡುಕೊಂಡಿದ್ದಾರೆ. ಈ ವಚನ ಎಂಬ ಕಾವ್ಯ ರೂಪವನ್ನು ಬೇರೆಲ್ಲಿಂದಲೋ ತಂದಿರಬೇಕೆಂದು ಹುಡುಕುವುದು ಸರಿಯಲ್ಲ. ಕನ್ನಡ ಸಾಹಿತ್ಯವೇ ಈ ರೂಪವನ್ನು ಹವ್ಯಾಸಗಳಿಂದ, ದಾಸಿಮಯ್ಯನ ಮೂಲಕ ಸೃಷ್ಟಿಸಿಕೊಂಡಿದೆ ಎಂಬುದೇ ಉಚಿತವಾದುದು.

ವಚನ ಚಳುವಳಿಯ ಚಾರಿತ್ರಿಕ ಸಂದರ್ಭವನ್ನು ಗಮನಿಸಿದರೆ, ಅದು ರಾಜ ಪ್ರಭುತ್ವದ ಕಾಲ, ವೈದಿಕ ಧರ್ಮದ ಪ್ರಾಬಲ್ಯವಿದ್ದ ಕಾಲ. ಪುರೋಹಿತಶಾಹಿ ನೆಲೆಗೊಂಡಿದ್ದ ಕಾಲ. ರಾಜಶಾಹಿ ಮತ್ತು ಪುರೋಹಿತಶಾಹಿಗಳು ಒಂದಕ್ಕೊಂದು ಪೂರಕವಾಗಿ ನಿಂತು ಆಳ್ವಿಕೆ ನಡೆಸುತ್ತಿದ್ದ ಕಾಲ. ಜನಸಮುದಾಯಗಳ ಸಮಾಜವನ್ನು ನಾಲ್ಕು ವರ್ಣಗಳಲ್ಲಿ ವಿಂಗಡಿಸಿತ್ತು. ರಾಜ, ಪುರೋಹಿತರು, ಯುದ್ಧವೀರರು, ವ್ಯಾಪಾರಿಗಳು ಒಮ್ಮತದಿಂದಿದ್ದು, ಶೂದ್ರರನ್ನು, ಅಸ್ಪೃಶ್ಯರನ್ನು ಸಮಾಜದ ಅಂಚಿಗೆ ತಳ್ಳಿ ತಮ್ಮ ಗುಲಾಮರನ್ನಾಗಿ ಮಾಡಿಕೊಂಡು ದುಡಿಸಿಕೊಳ್ಳುತ್ತಿದ್ದರು. ಈ ಅಂಚಿನ ಸಮುದಾಯವನ್ನು ಹೇಗೆ ಇಡಲಾಗಿತ್ತು? ಹೇಗೆ ನಡೆಸಿಕೊಳ್ಳಲಾಗುತ್ತಿತ್ತು? ಎಂಬುದು ಚರಿತ್ರೆಯಲ್ಲಿದೆ. ಈ ಸಮುದಾಯವನ್ನು ಎಲ್ಲ ಬಂಧನಗಳಿಂದ ಬಿಡುಗಡೆ ಮಾಡಲು ವಚನ ಚಳುವಳಿಯಲ್ಲಿ ಒಮ್ಮನದಿಂದ ಪ್ರಯತ್ನಿಸಲಾಯಿತು. ಬಸವ ಪೂರ್ವದಲ್ಲಿ ಈ ಪ್ರಯತ್ನಗಳು ನಡೆದಿದ್ದವು. ಬಸವಣ್ಣನೂ ಅಧಿಕೃತ ನಾಯಕನಾಗಿ ವಚನ ಚಳುವಳಿಯನ್ನು ಎಲ್ಲ ಸಮಾನ ಮನಸ್ಕರೊಂದಿಗೆ ಮುನ್ನಡೆಸಿ ಸಮಾಜಕ್ಕೆ, ಮನುಷ್ಯನ ಬಾಳ್ವೆಗೆ ಸೌಂದರ್ಯವನ್ನು ಒದಗಿಸಲು ಶತ ಪ್ರಯತ್ನ ಮಾಡಿದ್ದು ಕೂಡ ಚರಿತ್ರೆಯಲ್ಲಿದೆ. ಅದು ವರ್ತಮಾನದ ಮನುಷ್ಯ ಸಮಾಜಕ್ಕೆ ಕೈದೀವಿಗೆಯೂ ಆಗುತ್ತಲೇ ಇದೆ.

ದಾಸಿಮಯ್ಯನ ಮೇಲಿನ ವಚನವು, ವಚನಗಳಲ್ಲೇ ಸರಳವಾದದ್ದು. ಒಂದೆರಡು ಸಲ ಓದಿಕೊಂಡರೆ ಮನಸ್ಸಿನಲ್ಲಿ ನೆಲೆ ನಿಲ್ಲುತ್ತದೆ. ಸರಳ ರಚನೆಗಳ ಹಿಂದೆ ದೊಡ್ಡ ಇತಿಹಾಸವೇ ಅಡಗಿರುತ್ತದೆಂದು ಕಾಣುತ್ತದೆ. ಭಕ್ತಿ ಪಂಥದ – ವಚನ ಚಳುವಳಿಯ ಧ್ಯೇಯೊದ್ದೇಶಗಳ ಹಿನ್ನೆಲೆಯಿಂದ ಗ್ರಹಿಸಿದರೆ, ತತ್ವಗಳ ಹಿನ್ನೆಲೆಯಲ್ಲಿ ಗಮನಿಸಿದರೆ ಹಿರಿದಾದ ಉದ್ದೇಶ ಈ

ವಚನದಲ್ಲಿದೆ ಎಂದು ಹೇಳಬಹುದು. ಈ ವಚನ ಏಕಕಾಲಕ್ಕೆ ಮೂರು ಗುರಿಗಳನ್ನಿಟ್ಟುಕೊಂಡಿದೆ. ರಾಜಪ್ರಭುತ್ವಕ್ಕೆ, ಪುರೋಹಿತಶಾಹಿತ್ವಕ್ಕೆ ಪ್ರತಿರೋಧವನ್ನು ಒಡ್ಡುತ್ತದೆ. ಭೂಮಿಯ ಮೇಲಿನ ಸಕಲ ಸಂಪತ್ತು ರಾಜನ ಸ್ವತ್ತು ಎಂಬ ಲಿಖಿತವೋ, ಅಲಿಖಿತವೋ ಎಂಬ ಶಾಸನವಿದೆ. ಗಾಳಿ, ಬೆಳಕು ಕೂಡ ರಾಜನ ಅಧೀನವಾಗಿದೆ ಎಂಬ ನಂಬಿಕೆಯನ್ನು ಹುಟ್ಟಿಸಲಾಗಿತ್ತು. ರಾಜ ಭೂಮಿಯ ಮೇಲಿನ ಸಂಪತ್ತು ದಾನ ಮಾಡುವ ಹಕ್ಕನ್ನು ಹೊಂದಿದ್ದಾನೆ. ಯಾರಿಗೆ? ಬಡವರಿಗೆ, ದೀನದಲಿತರಿಗೆ ಮಾಡಿದ ಉದಾಹರಣೆಗಳು ಕಮ್ಮಿ. ಇಲ್ಲವೆನ್ನಬಹುದು. ಶಾಸನಗಳು ಈ ಸತ್ಯವನ್ನು ಹೇಳುತ್ತಿವೆ. ರಾಜ ದಾನ ಮಾಡುವುದು ಬ್ರಾಹ್ಮಣರಿಗೆ, ಪುರೋಹಿತರಿಗೆ ಮಾತ್ರ. ದಾನ ಪಡೆಯುವುದು ನಮ್ಮ ಹಕ್ಕು. ಅಲಿಖಿತ ಹಕ್ಕು ಎಂಬಂತೆ ಪುರೋಹಿತಶಾಹಿ ನಂಬಿಕೊಂಡು ಬಂದಿತ್ತು. ರಾಜ ನೀಡಿದ ದಾನವನ್ನು ಈ ಪುರೋಹಿತರು ಪಡೆದುಕೊಂಡು ರಾಜನನ್ನು ಹೊಗಳಿದ್ದೇ ಹೊಗಳಿದ್ದು. ಭಕ್ತಿ ಪರಂಪರೆಯ ದಾಸಿಮಯ್ಯ ದಾನ ನೀಡುವ ಹಕ್ಕಿನ ರಾಜನನ್ನು, ದಾನ ಪಡೆಯುವ ಹಕ್ಕಿನ ಪುರೋಹಿತರನ್ನು ಕಂಡು ವಿಷಾದ ಪಟ್ಟಿರಲೇಬೇಕು.

ಯಾವುದನ್ನು ರಾಜನ ಸ್ವತ್ತು ಎಂದು ಕರೆಯಲಾಗುತ್ತಿತ್ತೋ ಅದೆಲ್ಲವೂ ಶಿವನ ಸ್ವತ್ತು ಎಂದು ತಿಳಿದ. ಶಿವನ ಸ್ವತ್ತನ್ನು ರಾಜ ತನ್ನ ಸ್ವತ್ತೆಂದು ಭ್ರಮಿಸಿ ದಾನ ನೀಡುವ ಹಕ್ಕನ್ನು ಪಡೆದಿದ್ದನಲ್ಲ ರಾಜ, ರಾಜನನ್ನೇ ಪ್ರಶ್ನಿಸಿದ್ದು ವಚನ ಚಳುವಳಿಯ ಮುಖ್ಯ ತತ್ವಗಳಲ್ಲಿ ಒಂದು. ದಾಸಿಮಯ್ಯ ರಾಜಪ್ರಭುತ್ವವನ್ನೇ ಈ ವಚನದ ಮೂಲಕ ಪ್ರಶ್ನಿಸುತ್ತಾನೆ. ಅದೇ ಕಾಲಕ್ಕೆ ಈ ವಚನವು ದಾನ ಪಡೆಯುವ ಪುರೋಹಿತರನ್ನು ಪ್ರಶ್ನಿಸುತ್ತದೆ. ಶಿವನ ಸ್ವತ್ತನ್ನು, ತನ್ನ ಸ್ವತ್ತೆಂದು ತಿಳಿದ ರಾಜ, ಪುರೋಹಿತರಿಗೆ ನೀಡುವ ದಾನ ನೀಡಿ ಅವರಿಂದ ಹೊಗಳಿಸಿಕೊಳ್ಳುತ್ತಾನಲ್ಲ, ಹೊಗಳುವವರನ್ನು ಕುನ್ನಿಗಳೆಂದು ಈ ವಚನ ಜರಿಯುತ್ತದೆ. ಪ್ರಾಕೃತಿಕ ಸಂಪತ್ತು ರಾಜನದಲ್ಲ; ಅದು ಶಿವನದು ಎಂದು ಹೇಳುವ ಮೂಲಕ ದಾಸಿಮಯ್ಯ ಭೂಮಿಯ ಮೇಲಿನ ಸಂಪತ್ತಿನ ಹಕ್ಕನ್ನು ಜನಸಾಮಾನ್ಯರಿಗೆ ವರ್ಗಾಯಿಸಿ ಬಿಡುತ್ತಾನೆ.

ಮುಂದುವರಿದು ದಾನ ನೀಡುವುದು ರಾಜನ ಹಕ್ಕು ಮಾತ್ರವಲ್ಲ. ಜನಸಾಮಾನ್ಯರ ಹಕ್ಕು ಎಂದು ಸಾರುತ್ತಾನೆ. ಅಂದರೆ ವಚನ ಚಳುವಳಿಯ ಸಂದರ್ಭದಲ್ಲಿ ಕಾಯಕ ಜೀವಿಗೆ ವಿಶೇಷ ಸ್ಥಾನಮಾನ ನೀಡಲಾಯಿತು. ದುಡಿಯುವುದು ಪ್ರತಿ ಮನುಷ್ಯನ ಹಕ್ಕು ಮತ್ತು ದುಡಿಮೆ ಮನುಷ್ಯನಿಗೆ ಕಡ್ಡಾಯ ಎಂಬ ತತ್ವವನ್ನು ಆಚರಣೆಗೆ ತರಲಾಯಿತು. ಸಾಮಾನ್ಯ ಮನುಷ್ಯ ದುಡಿದು ಸಮಾಜಕ್ಕೆ ಸೌಂದರ್ಯ ತಂದುಕೊಟ್ಟನು. ದುಡಿದು ತನ್ನ ತುತ್ತನ್ನು ನೀಗಿಸಿಕೊಂಡು, ಮಿಕ್ಕಿದ್ದನ್ನು ದಾಸೋಹಕ್ಕೆ ನೀಡುವಂತಾಯಿತಲ್ಲ, ಸಾಮಾನ್ಯನೂ ದುಡಿದು ಗಳಿಸಿ ದಾನ ಮಾಡುವಂತಾದನು. ರಾಜನಿಗೆ ಮಾತ್ರವಿದ್ದ ದಾನದ ಹಕ್ಕು ಈಗ ಸಾಮಾನ್ಯನಿಗೆ ನೀಡುವಂತಾದದ್ದೇ ವಚನ ಚಳುವಳಿಯ ಸಂದರ್ಭದಲ್ಲಿ. 'ಬೇಡುವವನಿಲ್ಲದೆ ಬಡವನಾದೇನು' ಎಂಬ ಬಸವಣ್ಣನ ಮಾತಿನ ಆಶಯವೇನೆಂದರೆ ಶರಣರು ಬೇಡುವುದಿಲ್ಲವೆಂದು ಹೇಳುವ ಮೂಲಕ ಬೇಡುವ ಪುರೋಹಿತರಿಗೆ ಸಂದೇಶ ರವಾನಿಸುತ್ತಾನೆ.

ದಾಸಿಮಯ್ಯನ ಮೇಲಿನ ವಚನಕ್ಕೆ ಪೂರಕವಾಗಿ ಇನ್ನೊಂದು ವಚನವನ್ನು ನೋಡಬಹುದು. ನಿಸರ್ಗ ಸಂಪತ್ತು ಗಾಳಿ, ನೀರು, ಬೆಳಕು, ಬೆಳೆ ಎಲ್ಲವನ್ನು ತಮ್ಮದೆನ್ನುವ ಉಳ್ಳವರನ್ನು ದಾಸಿಮಯ್ಯ ಪ್ರಶ್ನಿಸುತ್ತಾನೆ. ಅರವಟ್ಟಿಗೆ, ಅನ್ನದ ಛತ್ರ ನಡೆಸುವವರ ಅಹಂಕಾರವನ್ನು ಕಂಡು 'ಸುರಿವ ಮಳೆ ಸುರಿಯದಿದ್ದರೆ ಅವರೇತರಲ್ಲಿ ನೀಡುವರು' ಎಂಬ ಮಾತು ಚಿಂತನೆಗೀಡು ಮಾಡುತ್ತದೆ.

●

*'ಸೂರು', ಎಂ.ಪಿ. ಪ್ರಕಾಶ ನಗರ, ಮಾರ್ಕಂಡೇಶ್ವರ ಡಿಇಡಿ ಕಾಲೇಜು ಹತ್ತಿರ, ಹೊಸಪೇಟೆ – ೫೮೩ ೨೦೧*
*ಬಳ್ಳಾರಿ ಜಿಲ್ಲೆ ಮೊ: ೯೪೪೮೧೫ ೬೯೪೫*



## ಶಾಂತಿಯುತ ಬಾಳಿಗಾಗಿ ನನ್ನ ಅನ್ವೇಷಣೆ

**ಡಾ.ಎ.ಪಿ.ಜೆ. ಅಬ್ದುಲ್ ಕಲಾಂ – ಗೌರವಾನ್ವಿತ ಮಾಜಿ ರಾಷ್ಟ್ರಪತಿಗಳು**

ಮಹಾದೇವ ಹೊರಟ್ಟಿ

ಕರ್ನಾಟಕ ಸರ್ಕಾರವು ಸ್ಥಾಪಿಸಿರುವ ಬಸವಪುರಸ್ಕಾರವನ್ನು ಈ ವರ್ಷ ನನಗೆ ಕೊಡಮಾಡುತ್ತಿರುವುದು ಅತ್ಯಂತ ಗೌರವದ ವಿಷಯವೆಂದು ನಾನು ಭಾವಿಸುತ್ತೇನೆ. ಬಸವೇಶ್ವರರು ಒಬ್ಬ ಸಂತ, ಕವಿ, ತತ್ವಶಾಸ್ತ್ರಜ್ಞ, ದಾರ್ಶನಿಕ ಮತ್ತು ಸಮಾಜ ಸುಧಾರಕರಾಗಿದ್ದರು. ೧೨ನೆಯ ಶತಮಾನದಲ್ಲಿ ಜೀವಿಸಿದ್ದ ಅವರು ಮಾನವತೆಗೆ ನಿಃಸ್ವಾರ್ಥಸೇವೆಯ ಬಹುಮುಖ್ಯವಾದ ಸಂದೇಶವನ್ನು ನೀಡಿದ್ದಾರೆ. ನಾನು ಬೆಂಗಳೂರಿನ ವಿಧಾನಸೌಧವನ್ನು ಪ್ರವೇಶಿಸಿದಾಗಲೆಲ್ಲ ಅದರ ಮುಂದೆ, "ಸರ್ಕಾರದ ಕೆಲಸ ದೇವರ ಕೆಲಸ"ವೆಂಬ ಸಂದೇಶವು ಬರೆದಿರುವುದನ್ನು ಕಾಣುತ್ತೇನೆ. ಅದು "ಕಾಯಕವೇ ಕೈಲಾಸ" ಎಂದು ಬೋಧಿಸುವ ಬಸವಣ್ಣನವರ ಮಹಾನ ಸಂದೇಶಕ್ಕೆ ಸಂವಾದಿಯಾಗಿದೆ. ಈ ಸಂದೇಶ ಇಡೀ ದೇಶದಾದ್ಯಂತ ಮಾರ್ದನಿಸಬೇಕು. ಒಂಬತ್ತು ಶತಮಾನಗಳ ಹಿಂದೆ ಜೀವಿಸಿದ್ದ ಸಂತ ಬಸವಣ್ಣ ಮಾನವಜೀವಿತವನ್ನು ಅತ್ಯಂತ ಶ್ರೇಷ್ಠ ರೀತಿಯಲ್ಲಿ ಸಮನ್ವಯಗೊಳಿಸಬಹುದಾದ ನೂತನ ಕಲ್ಪನೆಯೊಂದನ್ನು ನಮ್ಮ ದೇಶದ ಮುಂದಿಡುತ್ತಾರೆ. ಅವರ ಮಾತುಗಳನ್ನು ನೀವು ಓದಿದರೆ, ಅವೆಷ್ಟು ಶಕ್ತಿಯುತವಾಗಿದೆಯೆಂಬುದು ಅನುಭವಕ್ಕೆ ಬರುತ್ತದೆ ಎಂದರೆ, ಅವು ನಮ್ಮ ದೇಹ ಮತ್ತು ಆತ್ಮಗಳ ಅಂತರಾಳವನ್ನು ಒಳಹೊಕ್ಕಿಬಿಡುತ್ತವೆ. ಅವರು ದಿವ್ಯಸ್ತೋತ್ರಗಳ ರೂಪದಲ್ಲಿ ತಮ್ಮ ವಚನಗಳನ್ನು ರಚಿಸಿದರು ಮತ್ತು ಅವುಗಳನ್ನು ಜನಗಳೆದುರಿಗೆ ಹಾಡಿದರು. ಈ ವಚನದಲ್ಲಿ ಅವರು ಮಾನವ ಜೀವನಕ್ಕೆ ಮಹಾತ್ಮರ ಸಂಗವೆಂಬುದು ಎಷ್ಟು ಮುಖ್ಯ ಎನ್ನುವುದನ್ನು ನಮಗೆ ತಿಳಿಸಿಕೊಡುತ್ತಾರೆ.

**ಮಡಕೆಯ ಮಾಡುವರೆ ಮಣ್ಣೇ ಮೊದಲು**
**ತೊಡಿಗೆಯ ಮಾಡುವರೆ ಹೊನ್ನೇ ಮೊದಲು**
**ಶಿವಪಥವನರಿವಡೆ ಗುರುಪಥ ಮೊದಲು**
**ಕೂಡಲಸಂಗಮದೇವರನರಿವಡೆ**
**ಶರಣರ ಸಂಗವೇ ಮೊದಲು**

ಹೀಗೆ ಬಸವಣ್ಣನವರ ವಚನವು ಮಾನವ ಜೀವಿತದ ಉದ್ದೇಶವನ್ನು ನಮಗೆ ಪ್ರಕಾಶಿಸಿ ತೋರಿಸುತ್ತದೆ.

**ಶಾಂತಿಯನ್ನರಸುತ್ತಾ**

ಈ ಸಂದರ್ಭದಲ್ಲಿ ಭಾರತದ ಈಶಾನ್ಯ ರಾಜ್ಯಗಳಿಗೆ ನಾನು ಭೇಟಿಕೊಟ್ಟಿದ್ದನ್ನು

ನೆನಪಿಸಿಕೊಳ್ಳಲು ಇಚ್ಛಿಸುತ್ತೇನೆ. ೨೦೦೩ನೆಯ ಇಸವಿಯಲ್ಲಿ ನಾನು ಆ ರಾಜ್ಯಗಳಲ್ಲಿ ಒಂದಾದ ಅರುಣಾಚಲಪ್ರದೇಶಕ್ಕೆ ಹೋಗಿದ್ದೆ. ಅಲ್ಲಿ ತವಾಂಗ್ ಎಂಬ ಸ್ಥಳದಲ್ಲಿರುವ ಬೌದ್ಧ ವಿಹಾರಕ್ಕೆ ಭೇಟಿ ನೀಡಿದ್ದೆ. ಅದು ಇರುವುದು ಸಮುದ್ರಮಟ್ಟದಿಂದ ೩೫೦೦ ಮೀಟರ್ ಎತ್ತರದಲ್ಲಿ. ನಾನು ಅಲ್ಲಿ ಹೆಚ್ಚು ಕಡಿಮೆ ಒಂದು ದಿನದ ಮಟ್ಟಿಗೆ ಇದ್ದು, ಕಾಲ ಕಳೆದೆ. ಅಲ್ಲಿನ ವಿಪರೀತ ಶೀತದ ವಾತಾವರಣದಲ್ಲಿಯೂ ಸುತ್ತಲ ಹಳ್ಳಿಗಳ ಯುವಕರು ಮತ್ತು ಅನುಭವಿ ವೃದ್ಧರು – ಇವರಿಬ್ಬರೂ ಸಂತೋಷದ ಅಲೆಗಳನ್ನು ಪಸರಿಸುತ್ತಿರುವ ಅಪೂರ್ವ ಸನ್ನಿವೇಶಗಳನ್ನು ಗಮನಿಸಿದೆ. ನಂತರ, ನಾನೂರು ವರ್ಷಗಳಷ್ಟು ಹಳೆಯದಾದ ತವಾಂಗ್ ಬೌದ್ಧ ಮಠದ ಒಳಕ್ಕೆ ಹೋದೆ. ಅಲ್ಲಿಯೂ ಅಷ್ಟೆ. ಎಲ ವಯೋಮಾನಕ್ಕೆ ಸೇರಿದ ಬೌದ್ಧ ಭಿಕ್ಷುಗಳೂ ಪ್ರಶಾಂತಸ್ಥಿತಿಯಲ್ಲಿರುವುದನ್ನು ಕಂಡೆ. ತವಾಂಗ್ ಸುತ್ತಮುತ್ತಲ ಹಳ್ಳಿಗಳ ಜನರು ತಮ್ಮಲ್ಲೇ ತಾವು ಶಾಂತವಾಗಿರುವಂತೆ ಪ್ರೇರೇಪಿಸುತ್ತಿರುವುದೇನು ಎಂದು ನನ್ನನ್ನು ನಾನೇ ಕೇಳಿಕೊಂಡೆ. ಸಮಯ ಬಂದಾಗ ಅಲ್ಲಿನ ಮಹಂತ ಭಿಕ್ಷುವಿಗೆ ಕೇಳಿದೆ; "ತವಾಂಗ ಬೌದ್ಧ ಮಠ ಮತ್ತು ಸುತ್ತಲಿನ ಹಳ್ಳಿಗಳಲ್ಲಿನ ಪ್ರತಿಯೊಬ್ಬರೂ ಶಾಂತಿ ಮತ್ತು ಸಂತೋಷಗಳ ಬೆಳಕನ್ನು ಬೀರುತ್ತಿರುವುದು ಹೇಗೆ?" ಎಂದು, ಅವರು ಸ್ವಲ್ಪ ಕಾಲ ಸುಮ್ಮನಿದ್ದು, ನಂತರ ಮುಗುಳುನಗೆ ಬೀರಿ, ಹೀಗೆ ಹೇಳಿದರು; ನೀವು ಭಾರತದ ರಾಷ್ಟ್ರಪತಿಗಳಲ್ಲವೇನು? ನಮ್ಮ ಬಗ್ಗೆ ಮತ್ತು ಇಡೀ ದೇಶದ ಬಗ್ಗೆ ನಿಮಗೆ ಗೊತ್ತಿರಲಿಕ್ಕೂ ಸಾಕು". ಮತ್ತೆ ನಾನು ಹೇಳಿದೆ, "ಇದು ನನಗೆ ಬಹು ಮುಖ್ಯವಾದ ವಿಷಯ. ಈ ವಿಷಯದಲ್ಲಿ, ನಿಮ್ಮ ಚಿಂತನಾತ್ಮಕ ವಿಶ್ಲೇಷಣೆಯನ್ನು ದಯವಿಟ್ಟು ನನಗೆ ತಿಳಿಸಿ. ಅಲ್ಲೊಂದು ಭಗವಾನ್ ಬುದ್ಧನ ಸುಂದರ ಸುವರ್ಣ ವಿಗ್ರಹವಿತ್ತು. ಅದೂ ಕೂಡ ನಗುವನ್ನೂ ಶಾಂತಿಯನ್ನೂ ಸೂಸುತ್ತಿತ್ತು.

ಮಠದ ಮಹಂತ ಭಿಕ್ಷುಗಳು ತಮ್ಮ ಆಶ್ರಮದಲ್ಲಿದ್ದ ಸುಮಾರು ನೂರಕ್ಕೂ ಹೆಚ್ಚು ಕಿರಿಯ ಮತ್ತು ಹಿರಿಯ ಭಿಕ್ಷುಗಳನ್ನು ಅಲ್ಲಿ ಸಮಾವೇಶಗೊಳಿಸಿದರು. ಅವರ ನಡುವೆ ಮಹಂತರು ಮತ್ತು ನಾನು, ಈರ್ವರೂ ಕುಳಿತೆವು. ನಂತರ ಅವರು ಒಂದು ಪುಟ್ಟ ಉಪನ್ಯಾಸವನ್ನು ನೀಡಿದರು. ಅದರ ವಿಷಯವನ್ನೇ ನಾನಿಂದು ನಿಮ್ಮ ಮುಂದೆ ಹಂಚಿಕೊಳ್ಳುತ್ತಿರುವುದು. ಮಹಂತರು ಹೇಳಿದರು: "ಇಂದಿನ ಪ್ರಪಂಚದಲ್ಲಿ, ಪರಸ್ಪರ ಅಪನಂಬಿಕೆ ಮತ್ತು ಅಸಂತೋಷಗಳು ಹಿಂಸೆಯ ರೂಪವನ್ನು ತಳೆಯುವುದನ್ನು ನಾವು ಕಾಣುತ್ತೇವೆ. ನಿಮ್ಮ ಮನಸ್ಸಿನಿಂದ 'ನಾನು' ಮತ್ತು 'ನನ್ನದು' ಎಂಬೀ ಭಾವನೆಗಳನ್ನು ತೆಗೆದುಬಿಟ್ಟರೆ, ನೀವು ಅಹಂಕಾರವನ್ನು ನಿರ್ಮೂಲನಗೊಳಿಸಿಕೊಳ್ಳುವಿರಿ, ಅಹಂಕಾರ ನಿರ್ಮೂಲನದಿಂದ, ಸಹಮಾನವರೊಡನೆ ಇರುವ ದ್ವೇಷವೂ ಮಾಯವಾಗುವುದು. ನಮ್ಮ ಮನಸ್ಸಿನಿಂದ ದ್ವೇಷವೆಂಬುದು ಹೊರಟು ಹೋದಾಗ, ಚಿಂತನೆ ಮತ್ತು ಕಾರ್ಯಗಳಲ್ಲಿ ಕಂಡುಬರುವ ಹಿಂಸೆಯ ಭಾವನೆ ಕೂಡ ಅದೃಶ್ಯವಾಗುವುದು. ಆಗ ಸಮಾಜದಲ್ಲಿ ಕೇವಲ ಶಾಂತಿ, ಶಾಂತಿ, ಶಾಂತಿ ಮಾತ್ರವೇ ಅರಳುವುದು". ಹಿಂಸೆಯ ಭಾವನೆಯನ್ನು ತೆಗೆದುಬಿಟ್ಟರೆ, ಮಾನವನ ಮನಸ್ಸುಗಳಿಂದ ಶಾಂತಿಯ ಭಾವನೆ ತಾನೇ ತಾನಾಗಿ ಜಿನುಗುವುದು. ಶಾಂತಿಯುತ ಬಾಳುವೆಯ ಸುಂದರ ಸೂತ್ರದ ಅರ್ಥವನ್ನು ನಾನಂದು ಸಾಕ್ಷಾತ್ಕರಿಸಿಕೊಂಡೆ. ಆದರೆ, ಒಬ್ಬ ವ್ಯಕ್ತಿಯು ಕೈಗೊಳ್ಳಬೇಕಾದ ಅತ್ಯಂತ ಕಷ್ಟದ ಕಾರ್ಯವೆಂದರೆ "ನಾನು" ಮತ್ತು "ನನ್ನದು" ಎಂಬ ಮಾನಸಿಕ ಭಾವ ಪ್ರವಾಹದ ನಿವಾರಣೆ. ಅದಕ್ಕಾಗಿ ನಮ್ಮ ತತ್ತ್ವಶಾಸ್ತ್ರಜ್ಞರು ಪ್ರತಿಪಾದಿಸಿದ ಶಿಕ್ಷಣವನ್ನು ಸಣ್ಣ ವಯಸ್ಸಿನಲ್ಲಿಯೇ ನೀಡಬೇಕಾಗಿ ಬರುವುದು.



ಶಾಂತಿಯುತ ಮತ್ತು ಸಮೃದ್ಧ ಸಮಾಜದ ವಿಕಾಸದೆಡೆಗಿನ ನನ್ನ ಅನ್ವೇಷಣೆಯಲ್ಲಿ, ನನಗೆ ಅಂಶಿಕ ಉತ್ತರ ದೊರೆಯಿತು. ನೈಜ ಸತ್ಯಕ್ಕಾಗಿ ನನ್ನ ಹುಡುಕಾಟ ಇನ್ನೂ ಮುಂದುವರೆಯಿತು. ಬಲ್ಗೇರಿಯಾ ದೇಶಕ್ಕೆ ಹೋಗಿದ್ದಾಗ, ಅಲ್ಲಿನ ಅತ್ಯಂತ ಪುರಾತನ ಕ್ರೈಸ್ತ ಮಠವೊಂದನ್ನು ನೋಡಿದೆ. ಅಲ್ಲಿನ ತುಂಬ ಹಿರಿಯ ಸಂನ್ಯಾಸಿಗಳೊಡನೆ, ತವಾಂಗನಲ್ಲಿ ನಾನು ನಡೆದುಕೊಂಡ ಸಂದೇಶದ ಕುರಿತಾಗಿ ಚರ್ಚಿಸಿದೆ. ಅಲ್ಲಿನ ಸಂನ್ಯಾಸಿಯೊಬ್ಬರು, ಅದಕ್ಕೆ ಈ ಮಾತನ್ನು ಸೇರಿಸಿದರು. "ಇತರರ ತಪ್ಪನ್ನು ಕ್ಷಮಿಸಿಬಿಡುವುದು ಕೂಡ ಒಳ್ಳೆಯ ಬಾಳಿಗೆ ಅಡಿಪಾಯವಾಗಬಲ್ಲುದು" ಇದೇ ರೀತಿ ನಾನು ಸ್ವಾಮಿ ವಿವೇಕಾನಂದರ ಜನ್ಮಸ್ಥಳಕ್ಕೆ ಹೋಗಿದ್ದಾಗ, ಅಲ್ಲಿನ ಸಂನ್ಯಾಸಿಗಳಿಗೆ, ತವಾಂಗ್‌ನಲ್ಲಿ ನನಗಾದ ಅನುಭವವನ್ನು ವಿವರಿಸಿ ಹೇಳಿದೆ. ಅವರೂ ಕೂಡಾ ತವಾಂಗ್ ಅನುಭವವು ಖಂಡಿತವಾಗಿಯೂ ಸುಂದರವಾದುದು ಎಂದು ಭಾವಿಸಿದರು. ಅಷ್ಟೇ ಅಲ್ಲ, ಅದಕ್ಕೆ ಮತ್ತೊಂದು ಮಾತನ್ನು ಸೇರಿಸಿದರು. "ದಾನಬುದ್ಧಿಯು ಜೀವನಕ್ಕೆ ಶಾಂತಿ ಮತ್ತು ಸಂತೋಷಗಳನ್ನು ತುಂಬುತ್ತದೆ". ನಂತರ ನಾನು ರಾಜಸ್ಥಾನದ ಅಜಮೀರ್‌ನಲ್ಲಿರುವ ಷರೀಫ ದರ್ಗಾಗೆ ಭೇಟಿಕೊಟ್ಟು, ಅಲ್ಲಿನ ಶುಕ್ರವಾರದ ನಮಾಜ್‌ನಲ್ಲಿ ಭಾಗವಹಿಸಿದೆ. ಅಲ್ಲಿದ್ದ ಸೂಫಿ ಸಂತರೊಬ್ಬರು ನನಗೆ ಹೀಗೆ ಹೇಳಿದರು. "ಭಗವಂತನ ಸೃಷ್ಟಿಯಾದ ಮಾನವನಿಗೆ ಇನ್ನೊಂದು ಶಕ್ತಿಯುತ ಸೃಷ್ಟಿಯಾದ ಕೆಡುಕಿನ ಸೈತಾನ ಸವಾಲು ಹಾಕುತ್ತಾನೆ. ಪುಣ್ಯ ಕಾರ್ಯಗಳು ಮಾತ್ರವೇ ಒಳ್ಳೆಯ ಚಿಂತನೆಗೆ ನಮ್ಮನ್ನು ಒಯ್ಯುತ್ತದೆ. ಒಳ್ಳೆಯ ಚಿಂತನೆಗಳು ಭಗವಂತನು ನಮಗೆ ಆದೇಶಿಸಿದ, ಪ್ರೇಮಭಾವವು ಪಸರಿಸುವ ಮಹತ್ಕಾರ್ಯಗಳಾಗಿ ಪರಿವರ್ತನೆ ಹೊಂದುತ್ತವೆ".

ಪುಣ್ಯಕಾರ್ಯಗಳ ಬಗ್ಗೆ ಮಾತನಾಡುತ್ತಿರುವಾಗ, ಮಹಾತ್ಮ ಗಾಂಧೀಜಿಯವರಿಗೆ ಅವರ ತಾಯಿ ನೀಡಿದ ಸಲಹೆ ನನಗೆ ನೆನಪಾಯಿತು. ಅವರು ತಮ್ಮ ಮಗನಿಗೆ ಹೀಗೆ ನುಡಿದರು. "ಮಗೂ ನಿನ್ನ ಇಡೀ ಜೀವನದಲ್ಲಿ ನೀನು ಒಬ್ಬರದಾದರೂ ಜೀವನವನ್ನು ಕಾಪಾಡಲು ಅಥವಾ ಅದರಲ್ಲಿ ಬೆಳವಣಿಗೆಯನ್ನು ತರಲು ಶಕ್ತನಾದರೆ, ಮಾನವನಾಗಿ ನಿನ್ನ ಜನ್ಮ ಮತ್ತು ನಿನ್ನ ಜೀವನ ಯಶಸ್ವಿಯಾಗಿದೆ ಎಂದು ತಿಳಿದುಕೊ. ಪರಮಶಕ್ತನಾದ ಭಗವಂತನ ಆಶೀರ್ವಾದ ನಿನ್ನ ಮೇಲಿದೆ". ಈ ಬೋಧನೆಯು ಗಾಂಧೀಜಿಯವರ ಮನಸ್ಸಿನ ಮೇಲೆ ಗಾಢ ಪರಿಣಾಮವನ್ನು ಬೀರಿತು; ಮಾನವ ಜನಾಂಗಕ್ಕಾಗಿ ಕಾರ್ಯವೆಸಗಲು ಪ್ರೇರೇಪಣೆಯನ್ನು ನೀಡಿತು.

ಮೇಲಿನ ಈ ಎಲ್ಲಾ ಅನುಭವಗಳಿಂದ ನಾವು ತಿಳಿದುಕೊಳ್ಳಬಹುದಾದದ್ದು ಏನು? ಮನುಷ್ಯರು ತಮ್ಮ ಕ್ಷುದ್ರಸ್ವಾರ್ಥದ ಹಂತದಿಂದ ಮೇಲೆದ್ದು, ಯಾವ ಬಾಹ್ಯ ಆಕರ್ಷಣೆಗೂ ಒಳಗಾಗದೆ ಇತರರ ಸಲುವಾಗಿ ಕಾರ್ಯತತ್ಪರರಾದಾಗ ಮಾತ್ರ ಚಿರಂತನ ಶಾಂತಿಯನ್ನು, ಸಂತೋಷವನ್ನು ಪಡೆಯಬಲ್ಲರು ಎಂಬ ಒಳನೋಟವನ್ನು ಈ ಅನುಭವಗಳು ನೀಡುತ್ತವೆ.

ಕಡೆಯ ಮಾತುಗಳು

ಈಗ ನಾವು ಶ್ರೀ ಬಸವೇಶ್ವರರ ಮಹಾನ್ ವಾಕ್ಯಗಳಲ್ಲಿ ನಮ್ಮ ಮನಸ್ಸನ್ನು ತೊಡಗಿಸೋಣ. ಅವರು, ಪರಿಶುದ್ಧ ಹೃದಯದವನೊಬ್ಬನ ಗುಣಗಳನ್ನು ಈ ವಚನದಲ್ಲಿ ಸುಂದರವಾಗಿ ಬಣ್ಣಿಸುತ್ತಾರೆ.

**ಕಾಮವೇಕೋ, ಲಿಂಗಪ್ರೇಮಿಯೆನಿಸುವಂಗೆ?**
**ಕ್ರೋಧವೇಕೊ, ಶರಣವೇದ್ಯನೆನಿಸುವಂಗೆ?**
**ಲೋಭವೇಕೊ, ಭಕ್ತಿಯ ಲಾಭವ ಬಯಸುವಂಗೆ?**

ಮೋಹವೇಕೋ, ಪ್ರಸಾದವೇದ್ಯನೆನಸುವಂಗೆ
ಮದಮತ್ಸರವುಳ್ಳಂಗೆ ಹೃದಯಶುದ್ಧವೆಲ್ಲಿಯದೋ?
ಹದುಳಿಗರಾದಲ್ಲಿಪ್ಪ ನಮ್ಮ ಕೂಡಲಸಂಗಮದೇವ!
(ಹದುಳಿಗ = ತೃಪ್ತಿವುಳ್ಳವ)

ಈ ವಚನವು ಇದನ್ನು ಒತ್ತಿ ಹೇಳುವುದು: "ಯಾರ ನಡೆನುಡಿಗಳಲ್ಲಿ ಹೊಂದಾಣಿಕೆ ಇರುತ್ತದೆಯೋ, ಯಾರಲ್ಲಿ ಮದ ಮಾತ್ಸರ್ಯಗಳು ಇಲ್ಲವೋ ಅಂತಹವರ ಹೃದಯದಲ್ಲಿ ಮಾತ್ರ ಭಗವಂತನು ನೆಲೆಸಿರುತ್ತಾನೆ".

ಈಗ ನಾವು ಶ್ರೀ ಬಸವೇಶ್ವರರ ಮಹಾನ್ ವಾಕ್ಯಗಳಲ್ಲಿ ಇನ್ನೊಂದನ್ನು ಗಮನಿಸಿರಿ. ಅವರ ಈ ಮಾತುಗಳನ್ನು ನಾನು ಯಾವಾಗಲೂ ನನ್ನ ಮನಸ್ಸಿನಲ್ಲಿ ಇರಿಸಿಕೊಂಡಿರುತ್ತೇನೆ. "ನುಡಿದರೆ ಮುತ್ತಿನ ಹಾರದಂತಿರಬೇಕು, ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು" ಈ ಮಾತುಗಳೊಂದಿಗೆ, ಬಸವ ಪುರಸ್ಕಾರದಂತಹ ಅಪೂರ್ವ ಗೌರವವನ್ನು ನನಗೆ ನೀಡಿದ ಕರ್ನಾಟಕ ಸರ್ಕಾರ ಮತ್ತು ರಾಜ್ಯದ ಜನತೆಗೆ ಮತ್ತೊಮ್ಮೆ ನಾನು ಧನ್ಯವಾದಗಳನ್ನು ಸಮರ್ಪಿಸುತ್ತೇನೆ. ನಿಮ್ಮೆಲ್ಲ ಗುರಿಸಾಧನೆಗೂ ನನ್ನ ಶುಭಾಕಾಂಕ್ಷೆಗಳಿರಲಿ. ಭಗವಂತನು ನಿಮಗೆಲ್ಲರಿಗೂ ಅನುಗ್ರಹಿಸಲಿ.

●

'ಗುರುಕೃಪಾ', ಹೊಸಯಲ್ಲಾಪುರ ರೋಡ್, ಧಾರವಾಡ – ೫೮೦ ೦೦೧
೯೭೩೧೧ ೦೯೬೬೯

ಅನುಭಾವಿಗೆ ಅಂಗಶೃಂಗಾರವುಂಟೆ
ಅನುಭಾವಿಗೆ ಕಾಮಕ್ರೋಧವುಂಟೇ
ಅನುಭಾವಿಗೆ ನಾಹಂ ಸೋಹಂ ಸೋಹಂ ಎಂಬ
ಭ್ರಾಂತಿನ ಭ್ರಮೆಯುಂಟೆ
ಅನುಭಾವಿಗೆ ನನ್ನವರು ತನ್ನವರೆಂಬ
ನನ್ನ ಗದುಗದ ಮಾತುಂಟೆ
ಅನುಭಾವಿಗಳೆಂಬುವರು ಅಲ್ಲಿಗಲ್ಲಿಗೆ
ತಮ್ಮ ಅನುಭಾವಂಗಳ ಬೀರುವರೆ
ಅನುಭಾವಿಯ ಪರಿಯ ಹೇಳಿಹೆ ಕೇಳಿರಣ್ಣಾ
ನೀರಮೇಲಣ ತೆಪ್ಪದಂತೆ ಸಮುದ್ರದೊಳಗಿನ ಬೆಂಗುಂಡಿನಂತೆ
ಇರಬಲ್ಲಡೆ ಅನುಭಾವಿಗಳೆಂಬೆನಯ್ಯಾ
ವಚನಗಳ ಓದಿ ವಚನಗಳ ಕೇಳಿ
ಕಂಡ ಕಂಡ ಠಾವಿನಲ್ಲಿ ಬಂಡುಗೆಲೆವ ಜಗಭಂಡರ
ಆತ್ಮತೇಜಕ್ಕೆ ತಿರುಗುವ ವೇಷಧಾರಿಗಳ ಕಂಡು
ಅನುಭಾವಿಗಳೆಂದರೆ ಅಘೋರ ನರಕ ತಪ್ಪದು ಕಾಣಾ ಅಮುಗೇಶ್ವರಾ.

– ಅಮುಗೆ ರಾಯಮ್ಮ



## "ಗುರು ಲಘುವಪ್ಪನೆ ಲಘು ಗುರುವಪ್ಪನೆ?..."

ಶಿವಕುಮಾರ ಎಸ್. ಬಳಿಗಾರ್

೧೨ನೇ ಶತಮಾನ ಕರ್ನಾಟಕದ ಇತಿಹಾಸದಲ್ಲಿ ಅತೀ ಮಹತ್ವದ ಕಾಲ. ಕಲ್ಯಾಣದಲ್ಲಿ ಬಸವಣ್ಣನವರ ನೇತೃತ್ವದಲ್ಲಿ ಶರಣರೊಡಗೂಡಿ ನಡೆಸಿದ ಬಹುಮುಖ ಕ್ರಾಂತಿಯ ಪರ್ವಕಾಲ. ಜಗತ್ತಿನ ಧಾಮಿಕ ಆಧ್ಯಾತ್ಮಿಕ ಇತಿಹಾಸದಲ್ಲಿಯೇ ಕಂಡರಿಯದ ಲೋಕಾನುಭವ-ಶಿವಾನುಭವಗಳ ಸಮನ್ವಯದ ಶರಣ ಸಂಸ್ಕೃತಿಯ ಸಾಕ್ಷಾತ್ಕರಿಸಿದ ಸುವರ್ಣಕಾಲ. 'ಅನುಭವ ಮಂಟಪ' ವೆಂಬ ಸಂಸತ್ತಿನಲ್ಲಿ ಎಲ್ಲ ಜನರು ಒಂದುಗೂಡಿ ಪರಸ್ಪರ ಅನುಭಾವ, ಸಂವಾದದಿಂದ ಕಂಡುಂಡ ಸತ್ಯಗಳನ್ನು 'ವಚನ' ರೂಪದಲ್ಲಿ ಜನಕ್ಕಿತ್ತ ಪುಣ್ಯಕಾಲ. ಆಗ ಮಿನುಗಿದ ಶರಣ ಕಿರಣಗಳಲ್ಲಿ ಆ ಕಾಲದ ಕ್ರಾಂತಿಕಾರಕ ಬೆಳವಣಿಗೆಗಳಿಗೆ ಸಾಕ್ಷಿಯಂತಿದ್ದ ಉರಿಲಿಂಗ ಪೆದ್ದಿಯೂ ಒಬ್ಬ ಶರಣ. ಈತ ಉರಿಲಿಂಗ ದೇವರಿಂದ ದೀಕ್ಷೆ ಪಡೆದು ತನ್ನ ವಿಶಿಷ್ಟ ವ್ಯಕ್ತಿತ್ವದಿಂದ ತನ್ನ ಗುರುಗಳ ಪೀಠಕ್ಕೆ ಉತ್ತರಾಧಿಕಾರಿಯಾಗುತ್ತಾನೆ. 'ಉರಿಲಿಂಗಪೆದ್ದಿ ಪ್ರಿಯ ವಿಶ್ವೇಶ್ವರ' ಎಂಬುದು ಇವರ ವಚನಗಳ ಅಂಕಿತನಾಮ. ಇವರ ವಚನಗಳಲ್ಲಿ ವ್ಯಕ್ತವಾಗಿರುವ 'ತತ್ವಜ್ಞಾನ' ನಮ್ಮನ್ನೆಲ್ಲ ಬೆರಗುಗೊಳಿಸುತ್ತದೆ. ಸರಳ ಉಪಮೆಗಳ ಮೂಲಕ 'ಮಹಾಘನ' ತತ್ವ ತಿಳಿಸುವ ಇವರ ವಚನಗಳು ಗಹನವಾದ 'ಅನುಭಾವ'ದ ಬೆಳಕನ್ನು ಬೀರುತ್ತದೆ.

ಉರಿಲಿಂಗಪೆದ್ದಿಯ ಪ್ರಕಾರ 'ಗುರು' ಸಾಕ್ಷಾತ್ ಶಿವನ ನರರೂಪ. ಗುರುವಿಗೆ ಶಿವಸಾಕ್ಷಾತ್ಕಾರವಾಗಿರುವುದರಿಂದ ಅವನು ಮಾತ್ರ ಉತ್ತಮ ರೀತಿಯ ಮಾರ್ಗ ದರ್ಶನದಿಂದ ಶಿಷ್ಯರನ್ನು ತನ್ನಂತೆ ಮಾಡಬಲ್ಲ. ಗುರು ಮುಟ್ಟಿ ಗುರುವಾಗುವ ಗುರು ಶಿಷ್ಯ ಸಂಬಂಧ ಶರಣ ತತ್ವದ ವಿಶೇಷತೆ. ಗುರು ಕರುಣಾಮಯ ಯಾವ ಬೇಧವಿಲ್ಲದೆ ಎಲ್ಲರಲ್ಲೂ ಆ ಪರಮ ಚೈತನ್ಯ ಪರಶಿವನನ್ನೇ ಕಾಣುವ ಘನ ಮಹಿಮ. ಲಿಂಗಾಂಗ ಸಾಮರಸ್ಯ ಪಡೆದು ಲೋಕೋದ್ಧಾರಕ್ಕಾಗಿ ಜಂಗಮರೂಪಿಯಾಗಿ ಸುಳಿವ 'ಗುರು' ಸಾಕ್ಷಾತ್ ಘನವಸ್ತು ನಿರಾಕಾರ ಪರಶಿವನ ಸಾಕಾರ ರೂಪವೇ ಆಗಿರುವನು. ಅವನೆಂದೂ ಭವಬಂಧನ, ಮರವೆಗೊಳಗಾದೇ ಸದಾಕಾಲ ಮಹಾಘನಲಿಂಗ ಪರಶಿವ ಸ್ವರೂಪಿಯೇ ಆಗಿರುತ್ತಾನೆಂಬುದು ಉರಿಲಿಂಗ ಪೆದ್ದಿಯ ಖಚಿತವಾದ ಅಭಿಪ್ರಾಯ.

ಆದರೆ ಲೋಕದಲ್ಲಿನ ನೂರಾರು ಗುರುಗಳ ಕಂಡು ಅವರ ಹುಸಿಯಾಚರಣೆ. ಅಹಂಭಾವ, ಲಘುತನದಿಂದ ಬೇಸರಗೊಂಡ ಶರಣ 'ಗುರು' ಹೇಗಿರುವ, ಹೇಗಿರಬೇಕು? ಎಂಬ ವಿಚಾರವನ್ನು ಸೂತ್ರರೂಪವಾಗಿ ಈ ವಚನದಲ್ಲಿ ಅಭಿವ್ಯಕ್ತಿಸಿದ್ದಾರೆ. ಉರಿಲಿಂಗ ಪೆದ್ದಿಗಳ ಲೋಕಾನುಭವ ಶಿವಾನುಭವದ ಪ್ರತೀಕ ಪ್ರಸ್ತುತ ವಚನ ಗುರುವಿನ ನಡೆ ಸದಾ 'ಘನ'ವುಳ್ಳದಾಗಿರಬೇಕೆಂಬುದು ಅವರ ನಿಲುವು. ವಚನ ಇಂತಿದೆ:

**"ಲಘು ಗುರುವಪ್ಪನೆ? ಗುರು ಲಘುವಪ್ಪನೆ? ಆಗದಾಗದು**
**ಗುರು ಗುರುವೇ, ಲಘು ಲಘುವೇ.**
**ಶ್ರೀ ಗುರು ಲಘುವರ್ತನದಲ್ಲಿ ವರ್ತಿಸಿದಡೆ ಆಗದು ಆಚಾರ**
**ಶ್ರೀ ಗುರುಲಿಂಗ ಪ್ರಸಾದವನು ತಾನೇ ಲಘುಮಾಡಿ ಲಘುವಾದನಯ್ಯ**
**ಉರಿಲಿಂಗ ಪೆದ್ದಿ ಪ್ರಿಯ ವಿಶ್ವೇಶ್ವರ"**

ಶಬ್ದಾರ್ಥ: 'ಗುರು' 'ಲಘು' ಎಂಬ ಪದಗಳ ಪರಿಚಯ ರಾಷ್ಟ್ರಕವಿ ಕುವೆಂಪುವರ ನುಡಿಯಲ್ಲಿ ತಿಳಿದುಕೊಳ್ಳುವಾ.

'ಛಂದಸ್ಸಿನ ಪಾಠ ಹೇಳುವಾಗ 'ಗುರು'ಎಂದರೆ ಎರಡು ಮಾತ್ರೆಯ ಅಕ್ಷರ 'ಲಘು' ಎಂದರೆ ಒಂದು ಮಾತ್ರೆಯ ಅಕ್ಷರ. ಹಾಗೇಯೇ ಹಗುರ ಚಟುವಟಿಕೆ, ಶೀಘ್ರ ಚಲನೆ, ನಿಸ್ಸಾರತೆ, ಟೊಳ್ಳು, ಗಾಂಭೀರ್ಯರಾಹಿತ್ಯ ಮೊದಲಾದ ಅರ್ಥಗಳಲ್ಲಿ 'ಲಘು' ಎಂಬ ಪದ ಪ್ರಯೋಗವಾಗುತ್ತದೆ.

ಪದಾರ್ಥ ಲಘುವಾಗಿದೆ ಎಂದರೆ ಹಗುರವಾಗಿದೆ. ಲಗುಬಗೆಯಿಂದ ನಡೆದನು ಎಂದರೆ ಚಟುವಟಿಕೆಯಿಂದ ನಡೆದನು, ಅವನದು ತುಂಬಾ ಲಘುಬುದ್ಧಿ ಎಂದರೆ ಅವನ ಬುದ್ಧಿಯಲ್ಲಿ ಸಾರವಿಲ್ಲ, ಗಾಂಭೀರ್ಯವಿಲ್ಲ, ಟೊಳ್ಳು ಎಂದು ಅರ್ಥವಾದರೂ ಆಗಬಹುದು ಅಥವಾ ಅವನು ಯಾವಾಗಲೂ ಗಂಭೀರ ವಿಷಯಗಳಲ್ಲಿ ಪ್ರವೃತ್ತನಾಗದೆ ಹಗುರು ಹಾಸ್ಯ ಶೀತಲತೆಯಲ್ಲಿಯೇ ಕಾಲಕಳೆಯುತ್ತಾನೆ ಎಂದಾದರೂ ಅರ್ಥವಾಗಬಹುದು. ಲಘುವಿನಿಂದ ಲಾಘವ ಗುರುವಿನಿಂದ ಗೌರವ ಹುಟ್ಟುತ್ತದೆ.

ಲಾಘವ ಎಂದರೆ ಪೊಳ್ಳು, ತೂಕವಿಲ್ಲವಿರುವಿಕೆ. ಗೌರವ ಎಂದರೆ ದೊಡ್ಡತನ, ಗಾಂಭಿರ್ಯ, ಗಟ್ಟಿ, ತೂಕ, ಪವಿತ್ರತೆ, ಪೂಜ್ಯತೆ ಸಾಮಾನ್ಯವಾಗಿ ಬಳಕೆಯಲ್ಲಿರುವ ಹಸ್ತಲಾಘವ ಮತ್ತು ಆತ್ಮಗೌರವ ಎಂಬ ಮಾತುಗಳಲ್ಲಿ ಮೊದಲನೆಯದು ಸಂತೋಷ ಪ್ರಕಾಶನಕ್ಕಾಗಿ ಕೈಕುಲುಕುವುದನ್ನೂ ಎರಡನೆಯದು ತನ್ನ ಆತ್ಮದ ಸ್ಥಾನಕ್ಕೂ ಮಾನಕ್ಕೂ ನ್ಯೂನತೆವುಂಟಾಗುವ ರೀತಿಯಲ್ಲಿ ವರ್ತಿಸುವುದು ಎಂಬರ್ಥದಲ್ಲಿಯೂ ಬರುತ್ತದೆ. ನಾಟಕದ ವಿದೂಷಕನ ದೇಹದ ಗಾತ್ರ ಮತ್ತು ಭಾವಗಳಲ್ಲಿ 'ಗೌರವ' ಎಂದರೆ ಗುರುತ್ವ ಕಂಡುಬಂದರೂ ಅದನ್ನು ಟೊಳ್ಳು ಎಂದು ಕರೆಯುತ್ತಾರೆ. ಅದು ನಗೆಗೀಡಾಗುತ್ತದೆ ಅವನು ಲಘುವ್ಯಕ್ತಿ, ಅವನಲ್ಲಿರುವುದು ಆತ್ಮಲಾಘವ, ಪೂಜ್ಯರಾದ ಮಹಾತ್ಮ ಗಾಂಧಿಯವರ ಶರೀರದ ಗಾತ್ರ ಮತ್ತು ತೂಕಗಳಲ್ಲಿ ಲಘುತ್ವ ಕಂಡು ಬಂದರೂ ಅವನು 'ಗುರು'ವ್ಯಕ್ತಿ ಅವರಲ್ಲಿರುವುದು ಆತ್ಮಗೌರವ.

ಸರಳ ಅರ್ಥ: ಲಘು : ಸಣ್ಣದು ಗುರು –ದೊಡ್ಡದು, ಬೋಧಕ, ಅರಿವು,

**ಪ್ರಸಾದ** : ಪ್ರಸನ್ನತೆ, ಲಿಂಗ –ಇಷ್ಟಲಿಂಗ, ಆಚಾರ ಜಂಗಮ: ಅನುಭಾವ ದಿಂದ ಸಕಲರ ಲೇಸಿಗಿ ಸುಳಿವ ವ್ಯಕ್ತಿ/ಶಕ್ತಿ.

ವಾಚ್ಯಾರ್ಥ: ಭಾರತದ ದಾರ್ಶನಿಕ ಪರಂಪರೆಯಲ್ಲಿ 'ಗುರು'ವಿಗೆ ಬಹಳ ಪೂಜ್ಯ (ದೊಡ್ಡ) ಸ್ಥಾನವಿದೆ. ಜಗತ್ತಿನ ಎಲ್ಲ ಧರ್ಮಗಳಲ್ಲೂ ಗುರುವಿಗೆ ಅತ್ಯಂತ ಶ್ರೇಷ್ಠ ಸ್ಥಾನ, ಮಾನ, ಗೌರವ ಕೊಡಲಾಗಿದೆ. ಕಬೀರದಾಸರ ದೋಹೆಯಲ್ಲಿ ಗುರುಗೋವಿಂದ ಇಬ್ಬರು ಪ್ರತ್ಯಕ್ಷವಾದರೆ ನಾನು 'ಗುರು'ವಿನ ಕಾಲಿಗೆ ನಮಸ್ಕರಿಸುವೆ. ಏಕೆಂದರೆ ಗುರು ನನಗೆ ಗೋವಿಂದನ 'ಸಾಕ್ಷಾತ್ಕಾರ' ಪಡೆವ ದಾರಿ ತೋರುವನು ಎಂದಿದ್ದಾರೆ. ಜಗಜ್ಯೋತಿ ಬಸವಣ್ಣನವರು ಶಿವಪಥವರಿವಡೆ ಗುರು ಪಥವೇ ಮೊದಲು ಎಂದಿದ್ದಾರೆ ಭವಬಂಧನಕ್ಕೆ ಸಿಲುಕಿ



ಮಯಾಮರವೆಗೊಳಗಾದವರಿಗೆ ಸರಿದಾರಿ ತೋರಿ ಮುಕ್ತಿ ಪಡೆಯಲು ಸಹಾಯಕನಾಗುವ 'ಗುರು' ಯಾವಾಗಲೂ 'ಶ್ರೇಷ್ಠ' ದೊಡ್ಡವನು, ಅವನೆಂದೂ ಲಘುವಾಗಿ ಕೀಳಾಗಿ ವರ್ತಿಸುವುದಿಲ್ಲ. ಕೀಳಾಗಿ ಲಘುವಾಗಿ ವರ್ತಿಸುವವನು ಎಂದೂ ಗುರುವಲ್ಲ, ಲಘು ಲಘುವೇ ಮತ್ತು ಗುರು ಗುರುವೇ.

**ಭಾವಾರ್ಥ:** ಶರಣ ತತ್ವದಲ್ಲಿ ಗುರುವಿಗೆ ಬಹಳ ವಿಶಿಷ್ಟ ಸ್ಥಾನವಿದೆ. ಗುರುವನ್ನು ಉಪಾಧಿಕ ಮತ್ತು ನಿರುಪಾಧಿಕ ನೆಲೆಯಲ್ಲಿ ಗುರುತಿಸಿ ಶರಣರು ಗೌರವಿಸುತ್ತಾರೆ. ಉಪಾಧಿಕ ಗುರು ತನ್ನ ಅನುಭವ, ಜ್ಞಾನ ಮತ್ತು ದೀಕ್ಷೆಯ ಮೂಲಕ ಶಿಷ್ಯನ ಅಂತರಂಗದಲ್ಲಿ ಚೈತನ್ಯ ಚಿತ್ಕಳೆ ಜಾಗ್ರತಗೊಳಿಸಿ ಲಿಂಗಾನುಸಂಧಾನಕ್ಕೆ ಅನುವು ಮಾಡಿಕೊಡುತ್ತಾನೆ, ಶಿಷ್ಯ 'ಅರಿವೇ ಗುರುವಾಗಿ' ಶಿವಪಥದಲ್ಲಿ ಮುನ್ನಡೆದು 'ಗುರುಮುಟ್ಟಿ' ಗುರುವಾಗುತ್ತಾನೆ. ಸ್ವಯಂ ಶಿವಾನುಭವದಿಂದ ಗುರು ಸ್ಥಾನವನ್ನಾಲಂಕರಿಸಿ ಲಿಂಗಾಂಗ ಸಾಮರಸ್ಯದಿಂದ 'ಬಯಲು ಗಳಿಕೆ' ಪಡೆಯುತ್ತಾನೆ. ತನ್ನಲ್ಲಿ ಜಾಗ್ರತೆಗೊಂಡ ಅರಿವಿನಿಂದ ಸದಾಚಾರದಿಂದ ಲಿಂಗ ಜಂಗಮ ಪ್ರಸಾದ ತತ್ವಗಳಿಗೆ ಬದ್ಧನಾಗಿ ಪಡೆದುಕೊಳ್ಳುತ್ತಾ ಅನುಭಾವಿಯಾಗಿ 'ಗುರು' ಸ್ಥಾನ ಪಡೆದು ಎಲ್ಲರ ಗೌರವಕ್ಕೆ ಪಾತ್ರನಾಗುತ್ತಾನೆ. ಗುರು ಪೂಜ್ಯನಾಗಿ ಪವಿತ್ರಾಚಾರಣೆಯಿಂದ ಸದಾ ಶ್ರೇಷ್ಠ ಆತ್ಮಜ್ಞಾನಿಯಾಗುತ್ತಾನೆ. ಎಲ್ಲರ ದೃಷ್ಟಿಯಲ್ಲಿ ದೊಡ್ಡವನಾಗಿ ತನ್ನ ಆಚರಣೆಯಿಂದ ಮಾನ್ಯವಾಗುತ್ತಾನೆ. ಅವನಲ್ಲಿ ತನು ಮನ ಭಾವದಲ್ಲಿ ತಪ್ಪಿಯೂ ಕೂಡ ಲಘುತನ ಸುಳಿಯದು. ತೋಂಟದ ಸಿದ್ಧಲಿಂಗೇಶ್ವರರ ಈ ವಚನ ಶರಣರ ದೃಷ್ಟಿಯಲ್ಲಿ 'ಗುರು'ವಿನ ಸ್ವರೂಪ, ಕಾರ್ಯ ಮತ್ತು ಶ್ರೇಷ್ಠತೆಯನ್ನು ದರ್ಶಿಸುತ್ತದೆ.

**"ಪರಶಿವನೆ ತಾನೆನಗೆ ಗುರುವಾಗಿ ಬಂದು**
**ಸಂಸಾರ ಸಾಗರವ ದಾಟಿಸಿ ಅಖಂಡ ಪರಶಿವ ಚೈತನ್ಯ**
**ಪರಶಿವಲಿಂಗವ, ವಿಶ್ವದೊಳಗೆಲ್ಲ**
**ಕಾಂಬಂತೆ ತೋರಿಸಿ, ವಿಶ್ವ ಲಿಂಗದೊಳಗೆ ತೋರಿ**
**ಲಿಂಗವ ಎನ್ನಂಗದೊಳ ಹೊರಗೆ ತೋರಿ ಅಂಗವ**
**ಲಿಂಗದೊಳಗಿರಿಸಿ ರಕ್ಷಿಸಿದನಯ್ಯ**
**ಎನ್ನ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನು"**

ಅಕಸ್ಮಾತ್ 'ಗುರು'ವಾದವ ಲಿಂಗ (ಆಚಾರ) ಜಂಗಮ (ಅನುಭಾವ) ಪ್ರಸಾದ (ಪ್ರಸನ್ನತೆ) ಯನ್ನು ಲಘುಮಾಡಿದರೆ ಕೀಳಾಗಿ ವರ್ತಿಸಿದರೆ ತಾನೇ ಕೀಳಾಗಿ ಬಿಡುತ್ತಾನೆ 'ಗುರು' ಇದ್ದಲ್ಲಿ ಲಘುತನ ವಿರದು ಲಘುವರ್ತನೆ ಇರುವಲ್ಲಿ 'ಗುರು'ತನ ವಿರದು 'ಗುರು'ತನಕ್ಕೆ ಸ್ಥಾನ, ಮಾನ, ಪೀಠ ಪ್ರತಿಷ್ಠೆ ಹುದ್ದೆ, ಆಕಾರ, ವೇಷ ಭೂಷಣ, ಆಸ್ತಿ ಪಾಸ್ತಿ, ರಾಜಕೀಯ ಪ್ರಭಾವ ಶ್ರೀಮಂತಿಕೆ ಕಾರಣವಲ್ಲ. 'ಗುರು' ದೊಡ್ಡವನಾಗಿ ಗೌರವ ಪಡೆಯುವುದು ಸದಾಚಾರದಿಂದ ನುಡಿದಂತೆ ನಡೆದು ಸದಾ ಎಚ್ಚರಿಕೆಯಿಂದ ಸತ್ಪಥದಿ ನಡೆಯುವುದರಿಂದ ಮಾತ್ರ. ಎಂದು ಈ ವಚನದ ಭಾವಾರ್ಥ.

**ಸೂಚ್ಯಾರ್ಥ** : ಇಂದು ಜಗತ್ತಿನಲ್ಲಿ ನೂರಾರು ಸಾವಿರಾರು ಗುರುಗಳು ವೇಷ ಭೂಷಣ ಹಲವು ರೀತಿಯ ಸಾಧನೆ ಸಿದ್ಧಿಯ ಆಮಿಷವೊಡ್ಡಿ ತಮ್ಮದೇ ಆದ ಅನುಯಾಯಿ ವರ್ಗ ನಿರ್ಮಿಸಿಕೊಂಡು ಮೆರವಣಿಗೆ ಕುದುರೆಗಳಂತೆ ವಿಜೃಂಭಿಸುತ್ತಿದ್ದಾರೆ. ಅಂಥ ಹುಸಿ ಪ್ರತಿಷ್ಠೆಯ

ಗುರುಗಳ ಕಂಡೇ ಶಿವಯೋಗಿ ಸಿದ್ಧರಾಮೇಶ್ವರರು ಹೀಗೆ ಉದ್ಗರಿಸಿದ್ದಾರೆ.

**"ಲೋಕದಲ್ಲಿ ನೂರಾರು ಗುರುಗಳ ನೋಡಿ ನೋಡಿ ಬೇಸರಗೊಂಡೆನಯ್ಯ**
**ವಿತ್ತಾಪಹಾರಿ ಗುರುಗಳು ನೂರಾರು, ಶಾಸ್ತ್ರಾರ್ಥ ಹೇಳುವ ಗುರುಗಳು ನೂರಾರು**
**ಮಂತ್ರ ತಂತ್ರ ದಿಂದುಭಯ ಲೋಕದಲ್ಲಿ ಸುಖ ದುಃಖವೀವ ಗುರುಗಳು ನೂರಾರು**
**ಸತ್ಕರ್ಮೋಪ ದೇಶವನರುಹಿ ಸ್ವರ್ಗ ಮರ್ತ್ಯದಲ್ಲಿ ಸುಖವೀವ ಗುರುಗಳು ನೂರಾರು**
**ಜೀವಜೀವದ ಏಕತ್ವವನರುಹಿ**
**ನಿರ್ಮಲಜ್ಞಾನವೀವ ಗುರುಗಳು ಪ್ರಮಥರು**
**ಸಂಶಯಾವಳಿಗಳನ್ನೆಲ್ಲ ಜ್ಞಾನಗ್ನಿಯಿಂದ ದಹಿಸಿ**
**ಮುಕ್ತಿಯ ಹಂಗೆಂಬುವ ಬಂಧದಲ್ಲಿರಿಸಿದ ಗುರು**
**ಚೆನ್ನಬಸವಣ್ಣನಲ್ಲದೇ ಮತ್ತೋರ್ವರ ಕಾಣೆ ನೋಡಾ**
**ಕಪಿಲಸಿದ್ಧ ಮಲ್ಲಿಕಾರ್ಜುನಾ"**

ಜಗದ ಜನರ ದೃಷ್ಟಿ ಹೇಗೇಯೇ ಇರಲಿ ತನ್ನಲ್ಲಿಯ ಪರಶಿವ ಚೈತನ್ಯದ ಅಂತಃಸಾಕ್ಷಿಗನುಗುಣವಾಗಿ ಸದಾಚಾರ ಸದ್ವರ್ತನೆ ಅಳವಡಿಸಿಕೊಂಡು ನಡೆನುಡಿ ಒಂದಾಗಿ ಸಕಲ ಜೀವಿಗಳ ಲೇಸಿಗೆ ಆಚಾರದಲ್ಲಿ ವರ್ತಿಸುವವನೇ ನಿಜವಾದ ಗುರು. ಒಳಗೊಂದು ಹೊರಗೊಂದು, ನುಡಿಯೊಂದು ನಡೆಯೊಂದು, ನಂಬಿಕೆಯೊಂದು ಆಚಾರ ಇನ್ನೊಂದು ರೀತಿ ಹೀಗೆ ದ್ವಂದ ಮನದ ಭಾವದ ನಡೆಯ ನುಡಿಯ ಅತಿ ಡೊಂಬರು ಎಂದೂ 'ಗುರು' ಸ್ಥಾನ ಹೊಂದಲಾರರು. 'ಗುರು' ಗುರುವೇ ಲಘು ಲಘುವೇ ಎಂಬುದು ಸ್ಪಷ್ಟವಾಗಿ ಗುರುವಿನ ನಿಜಸ್ವರೂಪ ಗುರುತಿಸುವ ಶ್ರೇಷ್ಠತೆಯ ಮಾನದಂಡವ ಸೂತ್ರವೇ ಆಗಿದೆ.

**ತಾತ್ಪರ್ಯ :** ಈ ವಚನ ಆಧ್ಯಾತ್ಮಿಕ ಸಾಧನೆಯಲ್ಲಿ ಶಿವಪಥವನರುಹಿ ಲಿಂಗಾನು ಸಂದಾನದಿಂದ 'ಸ್ವಯಂ' ಪರಶಿವಸ್ವರೂಪಿಯ ಲಕ್ಷಣ ದರ್ಶಿಸಿದರೂ ಕೂಡ ನಿತ್ಯ ಜೀವನ ಲೋಕ ವ್ಯವಹಾರದಲ್ಲಿ ಹಲವು ಜನರಿಗೆ ಮಾರ್ಗದರ್ಶನ ನೀಡುವ ದಾರಿತೋರುವ ದೊಡ್ಡವರೆನಿಸಿಕೊಳ್ಳುವ ಪ್ರಮುಖ ಸ್ಥಾನದಲ್ಲಿರುವ ಎಲ್ಲ ವ್ಯಕ್ತಿಗಳಿಗೂ ಕೂಡ ತಮ್ಮ ಶ್ರೇಷ್ಠತೆಯನ್ನು ಗಳಿಸಲು / ಉಳಿಸಲು ಹೇಗಿರಬೇಕೆಂಬುದಕ್ಕೆ ಬೆಳಕು ತೋರುತ್ತದೆ. ತಾನು ವಹಿಸಿಕೊಂಡ ಸ್ಥಾನದಿಂದ, ಸದ್ವರ್ತನೆಯಿಂದ ಜನ ತನಗೆ ಗೌರವಿಸುತ್ತಿದ್ದಾರೆಂಬುದನರಿತು ಯಾವಾಗೂ ದಾರಿತಪ್ಪದಂತೆ ನಡೆದುಕೊಳ್ಳುವ ಎಚ್ಚರ ಗುರುಸ್ಥಾನದಲ್ಲಿರುವವರಿಗಿರಬೇಕು. ಅಕಸ್ಮಾತ್ ತಮ್ಮ ನಡೆಯಲ್ಲಿ ಕಿಂಚಿತ್ ಲೋಪವಾದರೂ ಕೂಡ ಅವರ ಸ್ಥಾನಕ್ಕೆ ಚ್ಯುತಿಬಂದು ಬಿಡುತ್ತದೆ. ತೋರಿಕೆಗೆ ಸ್ಥಾನ ಮಾನ ಪೀಠ ಪದವಿಗೆ ಗೌರವ ಕೊಟ್ಟರೂ ಕೂಡ ಅವರು ಜನರ ದೃಷ್ಟಿಯಲ್ಲಿ ಕೀಳಾಗಿ ಟೊಳ್ಳಾಗಿ ಅಗೌರವಕ್ಕೆ ತುತ್ತಾಗುತ್ತಾರೆ. ತನ್ನ ಆಚರಣೆಯಲ್ಲಿ ಒಂದು ನಿಮಿಷದ ಉದಾಸೀನ ಕೆಡಿಸಿತ್ತು ಎಂಬಂತಾಗುತ್ತದೆ.

ಒಮ್ಮೆ ಮಾಡಿದ ಸಾಧನೆಯಿಂದ ಶ್ರೇಷ್ಠನಾಗಿ ಎಲ್ಲರ ಗೌರವಕ್ಕೆ ಪಾತ್ರನಾದಾಗ ಅವದಾನದಿಂದ ತನ್ನ ವರ್ತನೆಯಲ್ಲಿ ಸದಾಚಾರವೇ ಪ್ರಾಣವಾಗಿ 'ಗುರು'ವಾಗುತ್ತಾನೆ. 'ಗುರು' ಎಂಬಲ್ಲಿ ದೊಡ್ಡದು ಅಂದಾಗ ಸಣ್ಣದು ಇರಲಾರದು 'ಲಘು' ಅಂದಾಗ ಚಿಕ್ಕದೇ ಅದು ಸಾಧನೆ ಶ್ರಮ ಶ್ರದ್ಧೆಯಿಂದ ವಿವಿಧ ಪಥಗಳಲ್ಲಿ 'ಗುರು'ವಾಗಬಹುದು. ●

*ವಿದ್ಯಾನಗರ, ಸಿರುಗುಪ್ಪ, ೫೮೩೧೨೧, ಬಳ್ಳಾರಿ ಜಿಲ್ಲೆ.*
*ಮೋ: ೯೯೧೬೦೬೪೩೯೫.*



## ಒಂದು ವಚನ ~ ಎರಡು ನೋಟ

ಡಾ. ಎಸ್. ಪ್ರಸಾದಸ್ವಾಮಿ ಅವರು ಕನ್ನಡ ಸಹ ಪ್ರಾಧ್ಯಾಪಕರಾಗಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕೆ.ಆರ್.ಪುರದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಅವರು ಕವಿ, ನಾಟಕಕಾರ, ವಿಮರ್ಶಕ. ಅವರ ಇಪ್ಪತ್ತೆಂಟು ಕೃತಿಗಳು ಇಲ್ಲಿವರೆಗೆ ಪ್ರಕಟವಾಗಿವೆ.

ಡಾ. ಗೀತಾ ಎನ್. ಅವರು ಕನ್ನಡ ಸಹ ಪ್ರಾಧ್ಯಾಪಕರಾಗಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಯಲಹಂಕದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಇಲ್ಲಿವರೆಗೆ ಅವರ ನಾಲ್ಕು ಕೃತಿಗಳು ಪ್ರಕಟವಾಗಿವೆ.

**ಮಹಾರಾಜನನೆಲ್ಲರೂ ಬಲ್ಲರು, ಆ ರಾಜನು ಆರನೂ ಅರಿಯನು**
**ಅರಿಯನಾಗಿ ಪದವಿಲ್ಲ ಫಲವಿಲ್ಲ ಭೋಗವಿಲ್ಲ ಪರಿಣಾಮವಿಲ್ಲ.**
**ಮಹಾರಾಜಾಧಿರಾಜ ಶಿವನನೆಲ್ಲರೂ ಬಲ್ಲರು, ಆ ಶಿವನು ಅರಿಯನು**
**ಅರಿಯನಾಗಿ ಪದವಿಲ್ಲ ಭೋಗವಿಲ್ಲ ಪರಿಣಾಮವಿಲ್ಲ.**
**ಇದು ಕಾರಣ ಶಿವನನರಿದ ಸದ್ಭಕ್ತರ ಸಂಗದಿಂದ**
**ಆ ಮಹಾಶಿವನು ತನ್ನನ್ನು ಅರಿವಂತೆ ಮಾಡಿಕೊಂಡನಾಗಿ**
**ಪದ ಫಲ ಭೋಗ ಪರಿಣಾಮ ಮತ್ತೆ ಉಂಟೇ?**
**– ಉರಿಲಿಂಗ ಪೆದ್ದಿ**

## ಒಂದು ನಿರ್ವಚನ

### ಡಾ. ಎಸ್. ಪ್ರಸಾದಸ್ವಾಮಿ

ಉರಿಲಿಂಗಪೆದ್ದಿಯವರ ಈ ವಚನ ಲೌಕಿಕ, ಅಲೌಕಿಕ, ಅಧ್ಯಾತ್ಮಗಳ ತುಲನೆ ಮಾಡುತ್ತಲೇ, ವಾಚ್ಯವನ್ನು ಮೀರಿದ ಧ್ವನಿಯನ್ನು ಹೊಮ್ಮಿಸಿದೆ. ಹನ್ನೆರಡನೆ ಶತಮಾನದ ಅಭಿವ್ಯಕ್ತಿಯಾಗಿದ್ದರೂ ಇಪ್ಪತ್ತೊಂದನೆ ಶತಮಾನಕ್ಕೂ ಅನ್ವಯವಾಗುವಂತಿರುವುದೇ ಈ ವಚನದ ವಿಶೇಷ.

'ಪರಸ್ಪರ', 'ಮುಖಾಮುಖಿ', 'ಸಂವಾದ', 'ಮಾತುಕತೆ' ಇವೆಲ್ಲವೂ ದ್ವಿಮುಖವೂ, ಬಹುಮುಖಿಯೂ ಆದ ಪ್ರಕ್ರಿಯೆಗಳು. ಈ ಪ್ರಕ್ರಿಯೆಗಳ ತಾತ್ವಿಕತೆ ಕೂಟ, ಸ್ನೇಹ, ಹಂಚಿಕೆ, ವಿಶ್ವಾಸ ಅಂದರೆ ಪರಸ್ಪರ ಕೊಡು-ಕೊಳುಗೆ. ಈ ವಚನದ ಮುಖ್ಯ ಧ್ವನಿಯೋ 'ಬಹುತ್ವ'ದ ನೆಲೆ. ಅದನ್ನು ಎರಡು ಉದಾಹರಣೆ ಮೂಲಕ ತಿದ್ದಿ ಮುಖಾಮುಖಿಯಾಗಿಸಿದ್ದಾರೆ.

ಮೊದಲ ನೆಲೆ– ಲೌಕಿಕ, ಎರಡನೆಯದು– ಅಲೌಕಿಕ. ಅರಸ ಪ್ರಜೆಗಳಿಗೆ ಗೊತ್ತು. ಆದರೆ ಎಲ್ಲ ಪ್ರಜೆಗಳು ಅರಸನಿಗೆ ಗೊತ್ತಿರಲಾರರು. (ಇದು ಪ್ರಜಾಪ್ರಭುತ್ವದ ರಾಷ್ಟ್ರಪತಿ, ಪ್ರಧಾನಮಂತ್ರಿ, ರಾಜ್ಯಪಾಲ, ಮುಖ್ಯಮಂತ್ರಿ, ಮಂತ್ರಿ, ಶಾಸಕರಿಗೂ ಅನ್ವಯಿಸಬೇಕು!) ತನ್ನ ಪ್ರಜೆಗಳೆಲ್ಲರನ್ನೂ ತಿಳಿಯದ ಕಾರಣಕ್ಕೇ, ರಾಜನಿಗೆ ಪದ (ಪದವಿ) ಇಲ್ಲ, (ಅವನಿಗಾಗಲೇ ರಾಜಪದವಿಯಿಲ್ಲಿದ್ದರೂ, ಕೂಡ!) ಪದವಿ ಕಾರಣಕ್ಕೆ ಸಿಗಬಹುದಾದ ಫಲವೂ ಇಲ್ಲ. (ಪುಣ್ಯ?) ಭೋಗ ಇಲ್ಲ (ಅರಸನ ವೈಭೋಗ ಇಲ್ಲಿ ನಗಣ್ಯ), ಪರಿಣಾಮವೂ ಇಲ್ಲ. (ಆತ ಯಶಸ್ವೀ ಅರಸನಾಗಿದ್ದಿರಬಹುದು, ಆದರೆ ಅದು ಮುಖ್ಯವೇ ಅಲ್ಲ).

ಅಂತೆಯೇ ಅಲೌಕಿಕ ಲೋಕದಲ್ಲಿ ಶಿವನನ್ನು ಭಕ್ತರು ಬಲ್ಲರು, ಆದರೆ ಶಿವನಿಗೆ ತನ್ನ ಭಕ್ತರು ಅಪರಿಚಿತರು! ಅದೇ ಕಾರಣಕ್ಕೆ ಆತ ತನ್ನ ಪದವಿ, ಭೋಗ, ಪರಿಣಾಮಗಳಿಂದ ವಂಚಿತ ಅಥವ ದೂರಾದವನು.

ಆದರೆ ಈ ಅಪವಾದದಿಂದ ಅಥವಾ ಲೋಪದಿಂದ ಬಿಡುಗಡೆ ಆಗುವ ಪರಿಹಾರ, ದಾರಿ, ಉಪಾಯ ಇದೆ. ಅದೆಂದರೆ, ಸದ್ಭಕ್ತರ ಅರಿಯುವುದು, ಅವರ ಸಂಗ ಮಾಡುವುದು, ಆ ಮೂಲಕ ತನ್ನನ್ನು ತಾನು ಅರಿಯುವುದು. ಇದು ಬಹಳ ದೊಡ್ಡ ಕಾಣ್ಕೆ. ಈ ಅರಿವೇ ಅಂತಿಮ. ಇದೇ ಜ್ಞಾನ, ಮುಕ್ತಿ. ಶಿವ ತನ್ನನ್ನು ತಾನು ಅರಿತರೆ, ರಾಜ ತನ್ನನ್ನು ತಾನು ಅರಿತರೆ, ಭಕ್ತ (ಪೂಜೆ) ತನ್ನನ್ನು ತಾನು ಅರಿತರೆ ಅದು ಬಹು ದೊಡ್ಡ ವಿವೇಕ, ದಾರಿ. ಇದರ ಮೂಲಕ ಬದುಕಿನ ಅಂತಿಮ ಸತ್ಯ ತಿಳಿಯಬಹುದು. ಅದರಿಂದಾಗಿ ಪದವಿ, ಫಲ, ಭೋಗ, ಪರಿಣಾಮಗಳು ಸಂಭವಿಸುತ್ತವೆ.

ತನ್ನನ್ನು ತಾನು ತಿಳಿವುದೇ ಅಲೌಕಿಕ, ಲೌಕಿಕದ ಪರಮಗುರಿ. ಇದು ವ್ಯಕ್ತಿ, ವ್ಯವಸ್ಥೆ, ಅಧಿಕಾರ ಸರಿ ದಾರಿಯಲ್ಲಿ ಸಾಗುವಂತೆ ಮಾಡುತ್ತದೆ. ಹೀಗೆ ವಾಚ್ಯದಿಂದ ಧ್ವನಿಯೆಡೆಗೆ ಸಾಗಿ, ಅಂತಿಮವಾಗಿ ಅನನ್ಯ ಸತ್ಯವನ್ನು ಸೂಚಿಸುವ, ಸ್ಫೋಟಿಸುವ ಅಪೂರ್ವ ವಚನ ಇದು. ಇಡೀ ವಚನ ಚಳುವಳಿಯ ಆಶಯವನ್ನು ದರ್ಶನವನ್ನು ಈ ವಚನ ಧ್ವನಿಸಿದೆ. ●

*ನಂ. ೩, ನುಡಿ, ೧ನೇ ಎ ಮುಖ್ಯರಸ್ತೆ, ಮುನೇಶ್ವರ ಲೇಔಟ್, ೪ನೆ ಬ್ಲಾಕ್, ಡಿ.ಬಿ. ಸಂದ್ರ,*
*ಬೆಂಗಳೂರು ೫೬೦ ೦೯೭ ೯೪೪೯೩ ೨೧೧೫೧*

# ಅಪರೂಪದ ವಚನ

## ಡಾ. ಗೀತಾ ಎನ್.

ವಚನ ಚಳುವಳಿ ಆಶಯಪರ, ಜೀವಪರ, ಸಂಸ್ಕೃತಿಪರ. ಬಹುಶಃ ಕನ್ನಡ ಸಂಸ್ಕೃತಿಯ ಖಚಿತ ಅಭಿವ್ಯಕ್ತಿ ಇದು. ಬಹುಜನರ, ಬಹು ಆಯಾಮದ ನೆಲೆ ವಚನಗಳ ಅಭಿವ್ಯಕ್ತಿಯ ಕೇಂದ್ರಭಿತ್ತಿ. ಅಲ್ಲಮ, ಬಸವ, ಅಕ್ಕ, ಸಿದ್ಧರಾಮ, ಚನ್ನಬಸವ ಮೊದಲಾದವರ ವಚನಗಳ ಅರ್ಥಶಕ್ತಿ, ಧ್ವನಿಶಕ್ತಿಗಳ ಸರಿಸಮ ಎನಿಸುವಂತೆ ಉರಿಲಿಂಗಪೆದ್ದಿ ಈ ವಚನ ರಚಿಸಿದ್ದಾರೆ. ಒಂದು ಕಾಲಘಟ್ಟದ ಅಭಿವ್ಯಕ್ತಿಯ ಬಹುಮುಖಗಳನ್ನು ಇವರೆಲ್ಲರ ವಚನಗಳಲ್ಲಿ ಗುರುತಿಸಬಹುದು.



'ವ್ಯವಸ್ಥೆ'ಯ ಪ್ರತಿನಿಧಿಯಾದ ಅರಸನನ್ನು ಪ್ರಜೆಗಳು ಬಲ್ಲರು. ಆದರೆ ಅರಸನಿಗೆ ಪ್ರಜೆಗಳು ಅಪರಿಚಿತರೆ! ಇದು ಲೌಕಿಕದ ಮಾತಾಯಿತು! ಶಿವ ತನ್ನ ಭಕ್ತರ ಅರಿತವನೆ? ಈ ವಚನ ಮುಂದಿಡುವ ಈ ಪ್ರಶ್ನೆ ಕುತೂಹಲಕರವಾದುದು. 'ಗುಲಾಮಿತನ', 'ದಾಸತನ'ದಿಂದ ಭಕ್ತರನ್ನು ಬಿಡುಗಡೆಗೊಳಿಸಿದ ದೊಡ್ಡ ಸಾಧನೆ ವಚನಗಳದು. ಏಕ, ಅದ್ವೈತ, ಅಭೇದಗಳ ಕಲ್ಪನೆ ಈ ವಚನದ ಆಶಯ. ಆ ಮೂಲಕ ಅಂತಿಮವಾಗಿ 'ತನ್ನತನ'ದ ಅರಿವು ಮೂಡುವುದು. ಈ ತನ್ನತನ ಸ್ವಾರ್ಥಕ್ಕೆ, ಪ್ರತಿಷ್ಠೆಗೆ ಅಲ್ಲ. ಅದು ಸಮುದಾಯದ ಭಾಗವಾಗುವ, ಸಂಸ್ಕೃತಿಯ ಸೆಲೆಯಾಗುವ, ವ್ಯಕ್ತಿ ಪ್ರತಿಭೆ ಸೂಸುವ ನಿಲುವೂ ಹೌದು.

'ವಿವೇಕ' ಮೂಡುವುದು, ಹೊಮ್ಮುವುದು ಹೇಗೆ? ಪರಸ್ಪರ ಅರಿತಾಗ! ಅದು ಅರಸ–ಪ್ರಜೆ ಆಗಿರಬಹುದು, ದೇವರು–ಭಕ್ತ ಆಗಿರಬಹುದು, ಪತಿ–ಪತ್ನಿ ಆಗಿರಬಹುದು. ಈ ವ್ಯವಸ್ಥೆಯ ಏಕಮುಖತೆಯನ್ನು ಮೇಲಿನ ವಚನ ಪ್ರಶ್ನಿಸುತ್ತದೆ.

'ಸದ್ಭಕ್ತರ' ಸಂಗ ಎಂಬ ಆಶಯ, ಕಲ್ಪನೆ, ಕನಸು ವಚನಕಾಲದ ಬಹುದೊಡ್ಡ ಕಾಣ್ಕೆ. ಕೇವಲ ಪೂಜಿಸುವವರು, ಆರಾಧಿಸುವವರು, ಗುಡಿ–ಗೋಪುರ ಕಟ್ಟಿಸಿದವರು ಸದ್ಭಕ್ತರಲ್ಲ, ಭಕ್ತರಾಗಿ, ಜ್ಞಾನದ ಅನ್ವೇಷಣೆಗೆ ತೊಡಗಿದವರೇ ಸದ್ಭಕ್ತರು. ಅಸಮಾನತೆ, ಅಭೇದ, ಅನೈಕ್ಯ, ದ್ವೈತಗಳನ್ನು ಮೀರಿದವರು ಸದ್ಭಕ್ತರು. (ವರ್ತಮಾನದಲ್ಲಾದರೆ, ಸತ್ಪ್ರಜೆಗಳು!) ಇಂವತರ ಸಂಗ ನಮ್ಮ (ದೇವರ–ಭಕ್ತರ) ಇಬ್ಬಂದಿಗಳನ್ನು, ದ್ವಂದ್ವಗಳನ್ನು, ಅನುಮಾನ, ವಿಚಲತೆಗಳನ್ನು ದೂರ ಮಾಡುತ್ತದೆ. ಆ ಮೂಲಕ ಅಂತಿಮ 'ಪದ' ಪಡೆಯಲು ಸಾಧ್ಯ.

ಲೌಕಿಕದ ಜ್ಞಾನ, ಪದವಿ, ಐಭೋಗ, ನೆಮ್ಮದಿಗಳೇ ಬದುಕಿನ ಫಲಗಳಲ್ಲ, ಗುರಿಗಳಲ್ಲ. ಅದನ್ನು ಮೀರಿದ, ಅದಕ್ಕೂ ಎತ್ತರದ ಸಾಧನೆ ಒಂದಿದೆ. ಅದೇ 'ತನ್ನ ತಾನರಿವುದು'. ಈ ಸ್ವಯಂ ತಿಳುವಳಿಕೆ ಭಕ್ತರ (ಜನರ) ಭೂತವನ್ನು ವಿಶ್ಲೇಷಿಸಲು, ವರ್ತಮಾನವನ್ನು ಅನ್ವಯಿಸಿಕೊಳ್ಳಲು, ಭವಿಷ್ಯವನ್ನು ರೂಪಿಸಿಕೊಳ್ಳಲು, ಎಲ್ಲಕ್ಕಿಂತ ಮುಖ್ಯವಾಗಿ ಸರಿದಾರಿ–ಸಹಬಾಳ್ವೆಗಳನ್ನು ಕಂಡುಕೊಳ್ಳಲು ಕಾರಣವಾಗುತ್ತದೆ. ಈ ವ್ಯಕ್ತಿನಿಲುವು ಸಮಷ್ಠಿಯನ್ನು ಪರಿಭಾವಿಸುತ್ತದೆ, ಪರಿಣಾಮಿಸುತ್ತದೆ, ಪ್ರತಿನಿಧಿಸುತ್ತದೆ. ಇಂತಹ ಅಪರೂಪದ 'ವಿವೇಕ'ವ್ನು ಹೊಂದಿದ ಸದ್ಭಕ್ತರ ಸಂಗ 'ಶಿವನ ತಿಳಿಯಲು' 'ಶಿವನು ತಿಳಿಯಲು' ಪೂರಕ ಎಂಬ ಧ್ವನಿ ಈ ವಚನದ ವಿಶೇಷವಾಗಿದೆ. ●

*ನಂ. ೩, ನುಡಿ, ೧ನೇ ಎ ಮುಖ್ಯರಸ್ತೆ, ಮುನೇಶ್ವರ ಲೇಔಟ್, ೪ನೆ ಬ್ಲಾಕ್, ಡಿ.ಬಿ. ಸಂದ್ರ,*
*ಬೆಂಗಳೂರು ೫೬೦ ೦೯೭ ೯೪೪೪೯ ೪೩೯೬೦*

**ಬೆಳೆವ ಭೂಮಿಯಲೊಂದು ಪ್ರಳಯದ ಕಸ ಹುಟ್ಟಿ**
**ತಿಳಿಯಲೀಯದು, ಎಚ್ಚರಲೀಯದು,**
**ಅವಗುಣವೆಂಬ ಕಳೆಯ ಕಿತ್ತು**
**ಎನ್ನ ಸಲಹಯ್ಯ ಕೂಡಲಸಂಗಮದೇವಾ.**

## ಅನುಭಾವ ಮಂಟಪದಲ್ಲೊಂದು ದಿನ
## ಚರ್ಚೆಯ ವಿಷಯ : "ತನ್ನರಿವು – ತನ್ನಿರವು"

**ಡಾ॥ ಬ್ರ.ಕು. ಬಸವರಾಜ ರಾಜಋಷಿ**

ಅನುಭಾವ ಮಂಟಪದಲ್ಲಿ ಹಿರಿಯ–ಕಿರಿಯ ಶರಣ–ಶರಣೆಯರೆಲ್ಲರೂ ತಮ್ಮ ತಮ್ಮ ಆಸನಗಳಲ್ಲಿ ಆಸೀನರಾಗಿದ್ದಾರೆ. ಅನುಭಾವ ಮಂಟಪದ ಅಧ್ಯಕ್ಷಪೀಠದಲ್ಲಿ ಅಲ್ಲಮ ಪ್ರಭುಗಳು ವಿರಾಜಮಾನರಾಗಿದ್ದಾರೆ. ಅನುಭಾವ ಮಂಟಪದ ಅಧ್ಯಕ್ಷಪೀಠದಲ್ಲಿನ ಅಲ್ಲಮ ಪ್ರಭುಗಳು ತಾವೇ ಬರೆದ ಈ ವಚನವನ್ನು ಶರಣರೆಲ್ಲರ ಮುಂದೆ ವಿಮರ್ಶೆಗಾಗಿ ಇಟ್ಟಿದ್ದಾರೆ.

**ಅಲ್ಲಮಪ್ರಭು :–**

**ಏನ ಕಂಡಡೇನಯ್ಯಾ, ತನ್ನ ಕಾಣದಾತ ಕುರುಡ**
**ಏನ ಕೇಳಿದಡೇನಯ್ಯಾ, ತನ್ನ ಕೇಳದಾತ ಕಿವುಡ**
**ಏನ ಮಾತಾಡಿದಡೇನಯ್ಯಾ, ತನ್ನ ಮಾತಾಡದಾತ ಮೂಕ.**
**ದಿಟದಿಂದ ತನ್ನ ತಾ ಕಾಣಬೇಕು,**
**ದಿಟದಿಂದ ತನ್ನ ತಾ ಕೇಳಬೇಕು,**
**ದಿಟದಿಂದ ತನ್ನ ತಾ ಮಾತಾಡಬೇಕು.**
**ಇದೇ ತನ್ನ ನೆಲೆ,**
**ಇದೇ ಸ್ವಭೂಮಿ, ಸ್ವಸ್ವರೂಪು**
**ಕಾಣಾ ಗುಹೇಶ್ವರಾ** (೧)

**ಶರಣೆ ಮಸಣಮ್ಮ :–** (ಶರಣ ಗಜೇಶಮಸಣಯ್ಯನವರ ಪುಣ್ಯಸ್ತ್ರೀ ಶರಣೆ ಮಸಣಮ್ಮ) ಪ್ರಭುಗಳೇ, ಶರಣ ಬಳಗದಲ್ಲಿರುವ ಕೆಲವು ತತ್ತ್ವಜ್ಞಾನಿಗಳು ತಮ್ಮನ್ನು ಶಿವೋಹಂ ಎಂದು, ಕೆಲವರು ಸೋಹಂ ಎಂದು, ಕೆಲವರು ಹಂಸೋಹಂ ಎಂದು, ಕೆಲವರು ಬ್ರಹ್ಮಾಸ್ಮಿ ಎಂದು, ಕೆಲವರು ಅಹಂಬ್ರಹ್ಮಾಸ್ಮಿ ಎಂದು, ಕೆಲವರು ತತ್ತ್ವಮಸಿ ಎಂದು, ಕೆಲವರು ಅಯಮಾತ್ಮ ಬ್ರಹ್ಮಾ ಎಂದು ಹೀಗೆ ಹಲವು ವಿಧಗಳ ತತ್ತ್ವಶಾಸ್ತ್ರಾಧ್ಯಯನ ಅಭ್ಯಾಸಿಗಳು ಇದ್ದಾರೆ. ತಮ್ಮ ಅರಿವಿನ ಬಗ್ಗೆ, ತಮ್ಮ ಇರುವಿನ ಬಗ್ಗೆ ಆಗಾಗ ಉದ್ಭವಿಸುವ ಈ ದ್ವಂದ್ವಗಳರಿವಿನ ಸತ್ಯಾಸತ್ಯತೆಗಳ ನಿರ್ಣಯವನ್ನು ಬಯಸಿ ನಾನು, ನೀವು ಹೇಳಿರುವ ವಚನಕ್ಕೆ ಪ್ರಥಮವಾಗಿ ಕೆಳಗಿನ ಈ ಪ್ರಶ್ನಾರ್ಥಕ ವಚನವನ್ನು ಪ್ರಭುಗಳ ಮುಂದೆ ನಿವೇದಿಸುತ್ತಿದ್ದೇನೆ. ಅದರ ಗೂಡಾರ್ಥವನ್ನು ನನಗೆ ವಿವರಿಸಿರಿ.

**ಎನ್ನನರುಹಿಸದಿರುವೆ**
**ಎನ್ನನರುಹಿಸು !?**
**ನಿನ್ನನರುಹಿಸಬೇಡ**



ಎನ್ನನರಿಯದವ
ನಿನ್ನನರಿಯ.
ಎನ್ನನರುಹಿಸದೆ
ನಿನ್ನನರುಹಿಸಿದಡೆ
ನೀ ನನಗೆ ಗುರುವಲ್ಲ;
ನಾ ನಿನಗೆ ಶಿಷ್ಯಳಲ್ಲ.
ಎನ್ನನರುಹಿಸಿದಡೆ
ನೀನೆನಗೆ ಗುರು;
ನಾ ನಿನಗೆ ಶಿಷ್ಯ
ಮಸಣಯ್ಯ ಪ್ರಿಯ ಗಜೇಶ್ವರಾ ! (೨)

ಶರಣೆ ಮಂಡಿಸಿದ ವಚನಕ್ಕೆ ಉತ್ತರಿಸಲು ಅಲ್ಲಮ ಪ್ರಭುಗಳು ಮೇಲೊಮ್ಮೆ ದೃಷ್ಟಿಸಿದರು. ಕೆಳಗೊಮ್ಮೆ ದೃಷ್ಟಿಸಿದರು. ಬಸವಣ್ಣನವರ ಕಡೆ ನೋಡಿದರು. ಚನ್ನಬಸವಣ್ಣನ ಕಡೆ ಮತ್ತೊಮ್ಮೆ ನೋಡಿದರು. ಮಡಿವಾಳ ಮಾಚಯ್ಯನವರನ್ನು ಕೇಳಲೆ ಎಂದು ತನ್ನನ್ನು ತಾನೇ ಪ್ರಶ್ನಿಸಿಕೊಂಡರು. ಪಕ್ಕದಲ್ಲೇ ಕುಳಿತಿದ್ದ ಸಿದ್ಧರಾಮಣ್ಣನವರತ್ತ ದೃಷ್ಟಿಹಾಯಿಸಿದರು. ನಂತರ ಅಂಬಿಗರ ಚೌಡಯ್ಯನವರತ್ತ ನೋಡಿದರು.

**ಅಲ್ಲಮ ಪ್ರಭುಗಳು ಕಣ್ಣಮುಚ್ಚಿದರು** – (ಅಲ್ಲೇ ಕುಳಿತಿದ್ದ) ಹಿರಿಯ ಶರಣರಾದ ಜೇಡರ ದಾಸಿಮಯ್ಯನವರೇ, ಮಸಣಮ್ಮ ತಾಯಿಯ ಪ್ರಶ್ನೆಗೆ ತಾವು ಉತ್ತರಿಸಬಲ್ಲಿರಾ? ಎಂದು ಪ್ರಶ್ನಿಸಿದರು.

**ಶರಣ ಜೇಡರ ದಾಸಿಮಯ್ಯನವರು ಹೇಳಿದರು:–** ಪ್ರಭುಗಳಅಪ್ಪಣೆಯಾಗಿದೆ ಹೇಳಲೇಬೇಕಲ್ಲವೆ!

**ಮರನೊಳಗಣ ಮಂದಾಗ್ನಿಯ ಉರಿಯದಂತಿರಿಸಿದೆ**
**ನೊರೆವಾಲೊಳಗೆ ತುಪ್ಪವ ಕಂಪಿಲ್ಲದಂತಿರಿಸಿದೆ**
**ಶರೀರದೊಳಗೆ "ಆತ್ಮ"ನ ಆರೂ ಕಾಣದಂತಿರಿಸಿದೆ**
**ನೀನು ಬೆರಸುವ ಭೇದಕ್ಕೆ ಬೆರಗಾದೆನಯ್ಯ! ರಾಮನಾಥ.**(೩)

**ಅಲ್ಲಮ ಪ್ರಭುಗಳು ಹೇಳಿದರು :–**

ಎಲ್ಲ ಶರಣ–ಶರಣೆಯರಿಗೆ ಹಿರಿಯ ಶರಣರಾದ ಜೇಡರ ದಾಸಿಮಯ್ಯನವರ ಉತ್ತರ ಸರಿ ಎನಿಸಿತೆ? ಎಂದು ಪ್ರಶ್ನಿಸಿದರು.

**ಅನುಭವ ಮಂಟಪದ ಶರಣರೆಲ್ಲ** ಉಘೇ, ಉಘೇ.... ಶರಣ ಜೇಡರ ದಾಸಿಮಯ್ಯನವರಿಗೆ ಉಘೇ, ಉಘೇ (ಎಂದು ಜೈಕಾರ ಹಾಕಿದರು).

ಅಲ್ಲಮಪ್ರಭುಗಳು ಶರಣೆ ಮಸಣಮ್ಮನವರತ್ತ ತಮ್ಮ ದೃಷ್ಟಿಹರಿಸಿ ತಾಯೆ–ತಮ್ಮ ಪ್ರಶ್ನೆಗೆ ಶರಣ ಜೇಡರ ದಾಸಿಮಯ್ಯನವರು ಉತ್ತರಿಸಿದ್ದಾರೆ. ಇದಕ್ಕೆ ತಮ್ಮ ಒಪ್ಪಿಗೆ ಇದೆಯೇ ಎಂದು ಕೇಳಿದರು.

**ಶರಣೆ ಮಸಣಮ್ಮ :–** ಇಲ್ಲ ಪ್ರಭುವೆ.

**ಅಲ್ಲಮ ಪ್ರಭು :–** ಹೌದು ತಾಯೆ, ಇದು ಗುಹೇಶ್ವರಲಿಂಗಕ್ಕೂ ಒಪ್ಪಿಗೆ ಇಲ್ಲ. ಜೇಡರ ದಾಸಿಮಯ್ಯನವರತ್ತ ದೃಷ್ಟಿ ಹರಿಸಿ–

ಹಿರಿಯ ಶರಣರಾದ ತಾವು ಮತ್ತೇನನ್ನಾದರೂ ಹೇಳಬಲ್ಲಿರಾ (ಎಂದು ಶರಣ ಜೇಡರ

ದಾಸಿಮಯ್ಯನವರಿಗೆ ಕೇಳಿದರು).

**ಶರಣ ಜೇಡರ ದಾಸಿಮಯ್ಯ :-**

ಪ್ರಭುವೆ ಉತ್ತರ ಹೇಳಲು ನಾನು ಪ್ರಾರಂಭಿಸಿದೆ. ಆದರೆ ತಾವು ಮಧ್ಯದಲ್ಲಿ ಪ್ರವೇಶಿಸಿ ನನ್ನ ಉತ್ತರ ಪೂರ್ಣಗೊಳಿಸಲು ಬಿಡದೆ ಅಪೂರ್ಣ ಉತ್ತರವನ್ನು ಶರಣರೆಲ್ಲರ ಮುಂದೆ ಇಟ್ಟು ಅದಕ್ಕೆ ಒಪ್ಪಿಗೆ ಪಡೆದೂ ಬಿಟ್ಟಿರಿ. ಆದರೂ ಸಹ ಈಗ ಮಸಣಮ್ಮ ತಾಯಿಯವರು ಒಪ್ಪುವಂತೆ ನಾನು ಉತ್ತರ ಹೇಳಬಲ್ಲೆ ಎಂಬ ಧೈರ್ಯ ನನಗಿದೆ ಪ್ರಭುಗಳೇ.

**ಮರನೊಳಗಣ ಮಂದಾಗ್ನಿಯ ಉರಿಯದಂತಿರಿಸಿದೆ**
**ನೊರೆವಾಲೊಳಗೆ ತುಪ್ಪವ ಕಂಪಿಲ್ಲದಂತಿರಿಸಿದೆ**
**ಶರೀರದೊಳಗೆ "ಆತ್ಮ"ನ ಆರೂ ಕಾಣದಂತಿರಿಸಿದೆ**
**ನೀನು ಬೆರಸುವ ಭೇದಕ್ಕೆ ಬೆರಗಾದೆನಯ್ಯ! ರಾಮನಾಥ.**

ಪುಣ್ಯಸ್ತ್ರೀ ಶರಣೆ ಮಸಣಮ್ಮನವರು ಈಗ ನನ್ನ ವಚನವನ್ನು ಸರಿಯಾಗಿಯೇ ಅರ್ಥ ಮಾಡಿಕೊಂಡಿದ್ದಾರೆ ಎಂದು ನನಗೆ ತಿಳಿಯಿತು. ಈ ದೇಹದ ಒಳಗಿರುವುದೇ "ಆತ್ಮ" ಎಂದು ಹೇಳಿದ ಈ ಉತ್ತರ ತಾಯಿಯವರಿಗೆ ಏಕೆ ಒಪ್ಪಿಗೆಯಾಗಿಲ್ಲ ಎಂದೂ ನನಗೆ ತಿಳಿಯಿತು.

ದೇಹದ ಒಳಗಿರುವುದು **"ಅವ್ಯಕ್ತ ಆತ್ಮ"** ಎಂದೇನೋ ಹೇಳಿದೆ. ಆದರೆ ಪುಣ್ಯಸ್ತ್ರೀಗಳು ಕೇವಲ ಆತ್ಮ ಆಗಿಲ್ಲ. ತಾಯಿಯ ಗರ್ಭದಲ್ಲಿರುವ ಶಿಶುವಿನ ಶರೀರ ಸೇರಿದಾಗಲೇ ಅದು **"ಜೀವಾತ್ಮ"** ಆಯಿತು.

ಸಜೀವ ಶರೀರದಲ್ಲಿರುವ **"ಅವ್ಯಕ್ತ ಆತ್ಮ"**ದ ಈ ಪ್ರಕ್ರಿಯೆಗೆ **"ಜೀವಾತ್ಮ"** ಎನ್ನಬೇಕಾಗುತ್ತದೆ. ಶರಣೆ ಮಸಣಮ್ಮನವರು **"ಜೀವಾತ್ಮ"** ಆಗಿದ್ದಾರೆ (ಎಂದರು ಜೇಡರ ದಾಸಿಮಯ್ಯ ಶರಣರು). ಜನನ-ಮರಣ ಚಕ್ರದಲ್ಲಿರುವ ಜೀವಾತ್ಮ ಆಗಿದ್ದಾರೆ. ಜೀವಾತ್ಮನಿಗೆ ತಂದೆ-ತಾಯಿ ಇದ್ದಾರೆ. ಜೀವಾತ್ಮ ಭೋಕ್ತ ಆಗಿದೆ.

**ಶರಣೆ ಮಸಣಮ್ಮ :-** ಶರಣ ಜೇಡರ ದಾಸಿಮಯ್ಯ ಶರಣರಿಗೆ ಉಘೇ, ಉಘೇ....

**ಅನುಭಾವ ಮಂಟಪದ ಶರಣರು :-** ಉಘೇ, ಉಘೇ ಶರಣ ಜೇಡರದಾಸಿಮಯ್ಯನವರಿಗೆ ಎಂದು ಝೇಂಕಾರ ಹಾಕಿದರು.

**ಅಲ್ಲಮಪ್ರಭುಗಳು** :-ದೇಹದೊಳಗೆ ಇದ್ದೂ ಇಲ್ಲದಂತೆ ಇರುವ **"ಆತ್ಮ"**ನನ್ನು ಹುಡುಕುವವನೇ ನಿಜವಾದ ಆಧ್ಯಾತ್ಮಿಕ ಗೂಢಚಾರಿ. ಇದನ್ನು ಅನುಭಾವಿಗಳು ಅನುಭಾವ ಮಂಟಪದಲ್ಲಿ ಅನುಭಾವ ಮಾಡಿದ್ದಾರೆ.

**ಶರಣೆ ಮಸಣಮ್ಮ ನುಡಿದರು :-**

**ಏನ ಕಂಡಡೇನಯ್ಯಾ, ತನ್ನ ಕಾಣದಾತ ಕುರುಡ**
**ಏನ ಕೇಳಿದಡೇನಯ್ಯಾ, ತನ್ನ ಕೇಳದಾತ ಕಿವುಡ**
**ಏನ ಮಾತಾಡಿದಡೇನಯ್ಯಾ, ತನ್ನ ಮಾತಾಡದಾತ ಮೂಕ.**
**ದಿಟದಿಂದ ತನ್ನ ತಾ ಕಾಣಬೇಕು,**
**ದಿಟದಿಂದ ತನ್ನ ತಾ ಕೇಳಬೇಕು,**
**ದಿಟದಿಂದ ತನ್ನ ತಾ ಮಾತಾಡಬೇಕು.**
**ಇದೇ ತನ್ನ ನೆಲೆ**



**ಇದೇ ಸ್ವಭೂಮಿ, ಸ್ವಸ್ವರೂಪು**
**ಕಾಣಾ ಗುಹೇಶ್ವರಾ.**

ಪ್ರಭುಗಳೇ, ಶರಣರಾದ ತಾವು ಈ ವಚನದಲ್ಲಿ ತಮ್ಮನ್ನೇಕೆ **"ಈಶ್ವರ"** ಎಂದು ಹೇಳಿಕೊಂಡಿರಿ? ಏಕೆಂದರೆ **"ಈಶ್ವರ"**ನು ಸ್ವಯಂಭು, ಅಜನ್ಮ, ಅಯೋನಿಜ, ಅಕಾಯ, ಅಶರೀರಿ, ಅವ್ಯಕ್ತ, ಅಭೋಕ್ತ, ಅಹಿಂಸಕ, ಸರ್ವಜ್ಞ, ಜ್ಞಾನೇಶ್ವರ, ಸರ್ವಶಕ್ತ, ವಿಶ್ವದ ಸಕಲ ಜೀವಾತ್ಮರೆಲ್ಲರಿಗೆ ಲೇಸನೇ ಬಯಸುವ ಏಕೈಕ ಪರಮಾತ್ಮ ಎಂದು ಅಣ್ಣ ಬಸವಣ್ಣನವರು ಹೇಳಿರುವಾಗ ತಮ್ಮ ವಚನದಲ್ಲಿ ತಮ್ಮನ್ನೇ ಈಶ್ವರ ಎಂದು ಸಾರುವ ಅಂಕಿತ ನಾಮವಾದ **"ಗುಹೇಶ್ವರ"** ಎಂದಿರುವಿರಿ. ಇದು ಅರ್ಥಪೂರ್ಣವಾಗಲು ಹೇಗೆ ಸಾಧ್ಯ ಎಂದೇ ನನಗೆ ಚಿಂತೆ. ನನ್ನ ಸಂಶಯವನ್ನು ಪರಿಹರಿಸಬಲ್ಲಿರಾ?!

**ಅಲ್ಲಮಪ್ರಭುಗಳು** :- ಹಿರಿಯ ಶರಣರಾದ ಜೇಡರ ದಾಸಿಮಯ್ಯನವರೇ, ಶರಣೆ ಮಸಣಮ್ಮನವರ ಸಂಶಯಯುಕ್ತ ಪ್ರಶ್ನೆಗೆ ತಾವು ದಯಮಾಡಿ ಉತ್ತರಿಸಬಲ್ಲಿರಾ.

**ಜೇಡರ ದಾಸಿಮಯ್ಯನವರು** :- ಶರಣೆ ಮಸಣಮ್ಮ ತಾಯಿಯವರೇ ನಿಮ್ಮ ಪ್ರಶ್ನೆ ಸರಿಯಾದ ಪ್ರಶ್ನೆಯಾಗಿದೆ. ಅಲ್ಲಮಪ್ರಭುಗಳ ವಚನಗಳು ಹೆಚ್ಚು ಒಗಟಿನ ವಚನಗಳಾಗಿರುತ್ತವೆ.

ಈ ಪ್ರಶ್ನೆಗೆ **"ಎರಡು ಪ್ರಕಾರದ ಉತ್ತರಗಳಿವೆ"**.

**ಮೊದಲನೆಯ ಅರ್ಥ**-ಅಲ್ಲಮ ಪ್ರಭುಗಳು ಅದ್ವೈತ ಸಿದ್ಧಾಂತಿಗಳು. ದೇಹವೆಂಬ ಈ ಸಜೀವ ಶರೀರದಲ್ಲಿ ಅಥವಾ ದೇಹವೆಂಬ ಗುಹೆಯಲ್ಲಿ ಸೇರಿಕೊಂಡಿರುವ ಆತ್ಮ. ಈ ಆತ್ಮ ಶರೀರವೆಂಬ ಗುಹೆಗೆ ಮಾತ್ರ ಈಶ್ವರ ಅಥವಾ ಒಡೆಯನಾಗಿದ್ದಾನೆ ಎಂದು ಅರ್ಥ. ಈ ಶರೀರವೆಂಬ ಗುಹೆಗೆ ಒಡೆಯನಲ್ಲದೆ ಈ ಜಗತ್ತಿಗೆ ಈಶ್ವರನಲ್ಲವೆಂಬುದು ಇಲ್ಲಿ ಮುಖ್ಯ ಅರ್ಥ. ಈ ಸತ್ಯವನ್ನೇ ಪ್ರಭುಗಳು ತಮ್ಮ ವಚನದಲ್ಲಿ ಇದೇ ತನ್ನ ನೆಲೆ, ತನ್ನ "ಸ್ವ ಭೂಮಿ" ಸ್ವ-ಸ್ವರೂಪ ಎಂದಿದ್ದಾರೆ. ಸ್ವ-ಭೂಮಿ, ಎಂದರೆ ಆತ್ಮನ ಭೂಮಿ ಎಂದರೆ ಆತ್ಮನ ದೇಹ ಎಂದು ಅರ್ಥ. "ಸ್ವ ಸ್ವರೂಪ" - ಅಂದರೆ ಆತ್ಮನ ಸ್ವರೂಪ, ಅಂದರೆ ಸ್ವ ಎಂದರೆ "ಆತ್ಮನ" ರೂಪ, ಅಂದರೆ ಅವ್ಯಕ್ತ ಚೈತನ್ಯ ಜ್ಯೋತಿರ್ಬಿಂದುರೂಪ ಎಂಬುದು. ಶರೀರದೊಳಗಿರುವ ಆತ್ಮನು ಯೋನಿಜ, ಜೀವಾತ್ಮ, ಕಾಯಧಾರಿ, ಭೋಕ್ತ, ಜನನ-ಮರಣ ಚಕ್ರದಲ್ಲಿರುವವನಾಗಿದ್ದಾನೆ ಎಂಬ ಅರ್ಥ. ಈ ಅರ್ಥಹೊಂದಿ ಅವರ ವಚನ ಗುಹೇಶ್ವರ ಎಂಬುದು ಅಂಕಿತನಾಮ ಪಡೆಯಿತು.

ಆದರೆ ವಿಶ್ವದ ಒಡೆಯನಾದ **"ಈಶ್ವರ"**ನು ಅಜನ್ಮ, ಅಯೋನಿಜ, ಅಶರೀರಿ, ಅಕಾಯ, ಅಭೋಕ್ತ, ಅಹಿಂಸಕ, ಸರ್ವಜ್ಞ, ಜ್ಞಾನೇಶ್ವರ.

**ಎರಡನೆಯ ಅರ್ಥವೇನೆಂದರೆ,**-ಅಲ್ಲಮನು ಕಾಮಲತೆಯ ದೇಹಾಂತ್ಯದ ನಂತರ ಚಿಂತಿತನಾಗಿ ಕಣಿಗಲ ವನದಲ್ಲಿ ಕುಳಿತಿದ್ದಾಗ, ತನ್ನ ಅಂಗುಷ್ಟದಿಂದ ಭೂಮಿಯ ಮಣ್ಣು ಕೆದಕುವಾಗ ಭೂಗರ್ಭದಲ್ಲಿ ಮುಚ್ಚಿ ಹೋಗಿದ್ದ ಗೊಗ್ಗೇಶ್ವರ ದೇವಾಲಯದ ಕಲಶದ ತುದಿ ಕಂಡಿತು. ಅಲ್ಲಿ ಭೂಮಿ ಅಗೆದಾಗ **"ಗೊಗ್ಗೇಶ್ವರ"** ದೇವಾಲಯ ಸಿಗುತ್ತದೆ. ಆ **"ಗೊಗ್ಗೇಶ್ವರ"** ದೇವಾಲಯದ ಒಂದು ಭಾಗದಲ್ಲಿ ಶಿವಶರಣ ಅನಿಮಿಷಯ್ಯನ ಇಷ್ಟಲಿಂಗೋಪಾಸನೆಯ ದೃಶ್ಯ ಕಾಣಿಸಿತು. (ವಿಶೇಷ ಗಮನಕ್ಕೆ : ಗೋರವಯ್ಯ-ಗೊಗ್ಗಯ್ಯ-ಗೊಗ್ಗೇಶ್ವರನಾಗಿರಬಹುದು. ಗೊರವಯ್ಯ-ಗೊಗ್ಗಯ್ಯ = ಮೈಲಾರಲಿಂಗ)

**ಪುಣ್ಯಉಳ್ಳ ಕಾಲಕ್ಕೆ ಪಾಷಾಣ ಪರುಷವಪ್ಪುದು ನೋಡಯ್ಯ. ಮಣ್ಣು ಹೊನ್ನಪ್ಪುದು.**

ಮುನ್ನ ಮುನ್ನವೆ ಅಚ್ಚೊತ್ತಿದ ಭಾಗ್ಯವೆನ್ನ ಕಣ್ಣಮುಂದೆ ಕಾಣಬಂದಿತ್ತು ನೋಡಾ,
**ಮಣ್ಣ ಮರೆಯ ದೇಗುಲದೊಳಗೊಂದು ಮಾಣಿಕ್ಯವ ಕಂಡ ಬಳಿಕ, ಇನ್ನು ಮುನ್ನಿನಂತಪ್ಪುದೇ, ಗುಹೇಶ್ವರ ?** (೪)

ಎನ್ನ ಮನದ ಕೊನೆಯ ಮೊನೆಯ ಮೇಲೆ
ಅಂಗವಿಲ್ಲದ ರೂಪನ ಕಂಡು ಮರುಳಾದೆನವ್ವ,
ಆತನ ಕಂಡು ಬೆರಗಾದೆನವ್ವ,
**"ಎನ್ನಂತರಂಗದ ಆತುಮನೊಳಗೆ ಅನಿಮಿಷ ನಿಜೈಕ್ಯ ಗುಹೇಶ್ವರನ ಕಂಡು"** (೫)

ದೇಗುಲದೊಳಗೆ ಅಲ್ಲಮನು ಪ್ರವೇಶಿಸಿದಾಗ ಅಲ್ಲಿ ತಪಸ್ಸಿಗೆ ಕುಳಿತಿದ್ದ "ಅನಿಮಿಷ ಶರಣರ ಕಣ್‌ಗಳ ದೃಷ್ಟಿಯು ಅಂಗೈನಲ್ಲಿದ್ದ ಇಷ್ಟಲಿಂಗದ ಮೇಲೆ ಕೇಂದ್ರೀಕೃತವಾದ ಬೆಳಕಿನ ಕಿರಣಗಳಿದ್ದವು. ಅವುಗಳನ್ನು ನೋಡಿದ ಅಲ್ಲಮನು ಆಶ್ಚರ್ಯಚಕಿತನಾಗಿ ನಿಂತಿರಲು ಆ ಇಷ್ಟಲಿಂಗವು ಶಿವಯೋಗಿ ಅನಿಮಿಷ ಗುರುವಿನಿಂದ ಅಲ್ಲಮನ ಕೈಗಳಿಗೆ ಅನುಗ್ರಹಿಸಲ್ಪಟ್ಟಿತು. ಅನಿಮಿಷ ಗುರುವು ಅಲ್ಲಯ್ಯನಿಗೆ ಇಷ್ಟಲಿಂಗವನ್ನು ಅನುಗ್ರಹಿಸಿದ ನಂತರ ತನ್ನ ಶರೀರ ತ್ಯಾಗ ಮಾಡಿದರು. ಆಗ ಆ ಇಷ್ಟಲಿಂಗಕ್ಕೆ ಬೆಳಕಿನ ಕಿರಣಗಳಾಗಿದ್ದ ಅನಿಮಿಷ ಗುರುವು ತನ್ನ ಇರುವಿಕೆಯನ್ನು ಅಲ್ಲಯ್ಯನ ಶರೀರದಲ್ಲಿ ನಿಲ್ಲಿಸಿದ ಪ್ರಭಾವದ ಪ್ರಭೆಯ ಕಾರಣದಿಂದ ಅಂದರೆ ಶಿವಯೋಗಿ ಅನಿಮಿಷ ಗುರು **"ಎನ್ನಂತರಂಗದ ಆತುಮನೊಳಗೆ ಅನಿಮಿಷ ನಿಜೈಕ್ಯಗುಹೇಶ್ವರನ ಕಂಡೆ"** ಎಂದು ಸತ್ಯದ ನಿಲುವನ್ನು ಈ ವಚನದಲ್ಲಿ ಅಲ್ಲಮ ಹೇಳಿದ್ದಾರೆ. ಅಂದಿನಿಂದ ಅಲ್ಲಮಪ್ರಭುವಾಗಿ ವಿರಾಜಮಾನಗೊಂಡು ಗುಹೇಶ್ವರನೆಂಬ ವಚನಾಂಕಿತ ಅಂಕುರಗೊಂಡಿತು.

ಅಂದರೆ ದೇಹದ ಒಳಗಿರುವವನು ಜೀವಾತ್ಮನೆಂದು ತಿಳಿಯಬೇಕು. ಪರಮಾತ್ಮನಲ್ಲ ಎಂದು ತಿಳಿಯಬೇಕು.

**ಅಲ್ಲಮಪ್ರಭುಗಳು :-** ಶರಣೆ ಮಸಣಮ್ಮ ತಾಯಿಯವರೇ, ತಮ್ಮ ಪ್ರಶ್ನೆಯಲ್ಲಿ ಅಡಗಿರುವ ನಿಗೂಢ ಉತ್ತರವನ್ನು ಪಡೆದು ತೃಪ್ತಿಯಾಯಿತೆ.

**ಶರಣೆ ಮಸಣಮ್ಮ :-** ಪ್ರಭುವೇ ನನ್ನೀ ಶರೀರದಲ್ಲಿ ಜನನ – ಮರಣ ಚಕ್ರದಲ್ಲಿನ ಜೀವಾತ್ಮಳಾದ ನಾನೂ **'ಗುಹೇಶ್ವರ'** ಎಂದು ತಾವು ಒಪ್ಪುವುದಾದರೆ ನನಗೆ ತೃಪ್ತಿಯಾಯಿತು. ಇದೇ ತನ್ನರಿವು–ತನ್ನಿರವು.

ನನ್ನಂತೆ–ತಮ್ಮಂತೆ ತಂದೆ–ತಾಯಿಗಳಿಂದ ಜನ್ಮ ಪಡೆದ ಎಲ್ಲ ಶರಣ ಬಾಂಧವರಾದ ಅನೇಕ ಜೀವಾತ್ಮರುಗಳೆಲ್ಲರೂ ಅವರವರ ಶರೀರದಲ್ಲಿ ಅವರೂ ಸಹ "ಗುಹೇಶ್ವರ" ಎಂದು ತಾವು ಒಪ್ಪುವುದಾದರೆ ನನಗೆ ತೃಪ್ತಿಯಾಯಿತು. ಇದೇ ತನ್ನರಿವು–ಇದೇ ತನ್ನಿರವು. ಆಗ ನೀವೆನಗೆ ಗುರು. ನಾ ನಿಮಗೆ ಶಿಷ್ಯಳು. ಶ್ರೀಗುರುವೇ ತಮಗೆ ಶರಣು–ಶರಣಾರ್ಥಿಗಳು.

**ಅಲ್ಲಮಪ್ರಭುಗಳು :-** ಒಂದರ್ಥದಲ್ಲಿ ನನ್ನ ವಚನದ ಅಂಕಿತನಾಮ ಗುಹೇಶ್ವರ. ಆದರೆ ಇನ್ನೊಂದರ್ಥದಲ್ಲಿ ತಾಯೆ ನೀವೇ ಏಕೆ! ಈ ಅನುಭಾವ ಮಂಟಪದಲ್ಲಿ ವಿರಾಜಮಾನರಾಗಿರುವ ಎಲ್ಲ ಶರಣರೂ ಸಹ ಅವರವರ ಶರೀರದಲ್ಲಿ ಅವರವರೆಲ್ಲ ಬೇರೆ ಬೇರೆ ಗುಹೇಶ್ವರರಾಗಿದ್ದಾರೆ ಎಂಬುದರಲ್ಲಿ ಅನುಮಾನವೇ ಇಲ್ಲ ತಾಯೆ. ಇದೇ ನನ್ನ ವಚನದ ಅಂಕಿತನಾಮ ಗುಹೇಶ್ವರದ ಅರ್ಥ ತಾಯೆ. ಇದೇ "ನನ್ನರಿವು" – "ನನ್ನಿರವು" ತಾಯೆ.

**ಶರಣೆ ಮಸಣಮ್ಮ :-** ಪ್ರಭುಗಳೇ, ನನ್ನ ಪ್ರಶ್ನೆಗೆ ತಾವು ಹೇಳಬೇಕಾದ ಉತ್ತರಗಳನ್ನು



ಹಿರಿಯ ಶರಣರಾದ ಜೇಡರ ದಾಸಿಮಯ್ಯನವರಿಂದ ಹೇಳಿಸಿದ್ದೀರಿ. ಆದ್ದರಿಂದ ಮೊದಲು ನಾನು ಅವರಿಗೆ ಶರಣು ಶರಣಾರ್ಥಿಗಳನ್ನು ಹೇಳಿ ನಂತರ ತಮಗೂ ಶರಣು–ಶರಣಾರ್ಥಿಗಳನ್ನು ಹೇಳುತ್ತಿರುವೆ. ಈಗ ನೀವು ನನ್ನ ಗುರು, ಈಗ ನಾನು ನಿಮಗೂ ಶಿಷ್ಯಳು ಹಾಗೂ ಜೇಡರ ದಾಸಿಮಯ್ಯ ಶರಣರಿಗೂ ಶಿಷ್ಯಳೇ ಆಗಿದ್ದೇನೆ ಪ್ರಭುವೆ. ಅನುಭವ ಮಂಟಪದ ಎಲ್ಲ ಶರಣರಿಗೆ ಶರಣು ಶರಣಾರ್ಥಿಗಳು.

**ಶರಣರೆಲ್ಲ :-** ಉಘೇ, ಉಘೇ ಶರಣೆ ಮಸಣಮ್ಮನವರಿಗೆ.... ಉಘೇ, ಉಘೇ ಶರಣ ಜೇಡರ ದಾಸಿಮಯ್ಯನವರಿಗೆ.... ಉಘೇ, ಉಘೇ ಶರಣ ಅಲ್ಲಮ ಪ್ರಭುದೇವರಿಗೆ (ಎಂದು ಝೇಂಕಾರ ಹಾಕಿದರು).

ಅಂದಿನ ಸಭೆ ನಾಳೆಯ ಸಭೆಗಾಗಿ ಸಮಾಪ್ತಿಯ ಘಂಟೆ ಬಾರಿಸಿತು.

*ಭಗವದ್ಗೀತಾ ಜ್ಞಾನಲೋಕ. ಬ್ರಹ್ಮಾಕುಮಾರಿ ಈಶ್ವರೀಯ ವಿಶ್ವ ವಿದ್ಯಾಲಯ, ಗಾಮನಗಟ್ಟಿ ರಸ್ತೆ,*
*ಹುಬ್ಬಳ್ಳಿ–೫೮೦೦೨೫     ಸ್ಥಾವರ ವಾಣಿ : ೦೮೩೬–೨೫೫೬೭೭೫, ೨೫೫೯೯೨೬*

ಎಂಜಲು ತಿಂಬ ಜಡದೊಳಗೆ ಹದಿನೆಂಟು ಜಾತಿಯ
ಎಂಜಲು ಭುಂಜಿಸಿ ಉತ್ತಮರೆನಿಸಿಕೊಂಬ ಭವಜೀವಿಗಳು ಕೇಳಿರೊ
ಕುಲಜರಾಗಿ ನಡೆದು ಸುಜಾತರೆನಿಸಿಕೊಂಬಿರಿ
ಅಜವಧೆ ಗೋವಧೆ ಮಾಡುವ ಅನಾಚಾರಿಗಳು ನೀವು ಕೇಳಿರೋ
ಬ್ರಾಹ್ಮಣ ವಾಕ್ಯವ ಕಲಿತು
ಬ್ರಾಹ್ಮಣರೆನಿಸಿಕೊಂಬಿರಿ
ಕರ್ಮಹಿಡಿದು ನೋಡಹೋದರೆ ನಿಮ್ಮಿಂದ ಕರ್ಮಿಗಳಿಲ್ಲ
ನಿಮ್ಮ ಧರ್ಮದ ಬಟ್ಟೆಯ ನೀವರಿಯದೆ ಹೋದಿರಿ
ಚಿತ್ತವಿಲ್ಲದೆ ಶಿವಭಕ್ತರ ಬುದ್ಧಿಯವಿಡಿದು
ನಡೆಯಲೊಲ್ಲದೆ ಕೆಟ್ಟು ಹೋದಿರಿ
ಸುಧೆ ಹೀನಶುದ್ಧವೆಂದು ಕೊಂಬಿರಿ
ಸುರೆ ಸೇವಿಸುವ ಬೋಕರೆಂಜಲು ಎಣ್ಣೆ ಶುದ್ಧವೆಂದು ಕೊಂಬಿರಿ
ಬುದ್ಧಲೆಯ ಎಂಜಲು ಹಾಲು ಮೊಸರು ಮಜ್ಜಿಗೆ ಶುದ್ಧವೆಂಬಿರಿ
ಶೂದ್ರರೆಂಜಲು ಹಾಲು ಮೊಸರು ತುಪ್ಪ
ಆವ ಜಾತಿಯ ಮನೆಯಲ್ಲಿರ್ದಡೆ
ಶುದ್ಧವೆಂದುಕೊಂಡಿರಿ
ಬುದ್ಧಲೆಯೊಳಗೆ ತುಪ್ಪವ ತುಂಬಿಹುದೋ
ಆ ಹೊಲೆಯರ ಎಂಜಲ ತೊಗಲ ಸಗ್ಗಳೆಯಲ್ಲಿ ಉದಕವ ಕೊಂಬಿರಿ
ಹದಿನೆಂಟು ಜಾತಿಗೆ ಅಧಿಕರೆನಿಸಿಕೊಂಬಿರಿ
ದ್ವಿಜರೆಲ್ಲರಿಗೆ ಲೆಕ್ಕವಿಲ್ಲದ ನರಕವೆಂದ ಕಲಿದೇವರ ದೇವಯ್ಯ.

**– ಮಡಿವಾಳ ಮಾಚಿದೇವ**

# ಶರಣ ಕ್ರಾಂತಿ – ನನ್ನ ಪ್ರತಿಕ್ರಿಯೆ

**ಪ್ರೊ. ಶಿವಗಂಗಾ ರುಮ್ಮಾ**

**ಪ್ರೊ. ಶಿವಗಂಗಾ ರುಮ್ಮಾ ಅವರು ಕಲ್ಬುರ್ಗಿಯ ಕೇಂದ್ರ ವಿಶ್ವವಿದ್ಯಾಲಯದ ಕನ್ನಡ ವಿಭಾಗದ ಪ್ರಾಧ್ಯಾಪಕರು ಹಾಗೂ ಡೀನ್ ಆಗಿ ಸೇವೆ ಸಲ್ಲಿಸುತ್ತಿದ್ದಾರೆ. ಕನ್ನಡದ ಪ್ರಖರ ಚಿಂತನೆಯ ವಿಮರ್ಶಕಿ. ವಚನ ಸಾಹಿತ್ಯ ಇವರ ಪ್ರಧಾನ ಆಸಕ್ತಿಯ ಕ್ಷೇತ್ರ. ಮಾರ್ಕ್ಸ್‌ವಾದಿ, ಸಮಾಜವಾದಿ ಚಿಂತನೆಗಳು ಇವರ ವಿಮರ್ಶೆಯ ತಾತ್ವಿಕತೆಯನ್ನು ರೂಪಿಸಿವೆ. ಆದರೆ ಪಕ್ಷವೊಂದರ ಜನಪರ ಹಾಗೂ ಮಾನವೀಯ ನಿರೂಪಣೆಗಳಲ್ಲಿ ಇವರಿಗೆ ಹೆಚ್ಚಿನ ಆಸಕ್ತಿ. ಇವರು ಈ ಬಾರಿಯ ಶರಣ ಕ್ರಾಂತಿ – ನನ್ನ ಪ್ರತಿಕ್ರಿಯೆಯಲ್ಲಿ ಪಾಲ್ಗೊಂಡು ತಮ್ಮ ಅಭಿಪ್ರಾಯಗಳನ್ನು ಹಂಚಿಕೊಂಡಿದ್ದಾರೆ.**

**೧. ಶರಣ ಚಳುವಳಿಯ ಹಿನ್ನೆಲೆಯನ್ನು ನೀವು ಗ್ರಹಿಸುವ ಮತ್ತು ಅರ್ಥೈಸುವ ಬಗೆಯನ್ನು ಕುರಿತು ಹೇಳಿ.**

**ಉತ್ತರ:** ಯಾವುದೇ ಚಳುವಳಿಯು ಒಂದು ದಿನದಲ್ಲಿ ಮೂಡಿದ ಪ್ರಕ್ರಿಯೆಯಾಗಿರುವುದಿಲ್ಲ. ನಿರಂತರವಾದ ಚಾರಿತ್ರಿಕ ಎಳೆಗಳು ಚಳುವಳಿಯ ವರ್ತಮಾನಕ್ಕೆ ತಳಕು ಹಾಕಿಕೊಂಡಿರುತ್ತವೆ. ಅದೊಂದು ಸಂಕೀರ್ಣವಾದ ಪ್ರಕ್ರಿಯೆ. ಹೀಗಾಗಿ ನಮ್ಮ ನಮ್ಮ ಅಧ್ಯಯನದ ಮಿತಿಗಳಿಂದ ಅದನ್ನು ಗ್ರಹಿಸಿ ಅರ್ಥೈಸಬಹುದೇ ಹೊರತು ಅದರ ಒಟ್ಟು ಚಿತ್ರಣ ಕಟ್ಟಿಕೊಳ್ಳುವುದು ಸಾಧ್ಯವಿಲ್ಲ. ಆರನೆಯ ವಿಕ್ರಮಾದಿತ್ಯನ ಕಾಲದ ಕಲ್ಯಾಣ ಹೇಗಿತ್ತು ಎಂಬುದನ್ನು ವಿಕ್ರಮಾಂಕದೇವಚರಿತ ಹೇಳುತ್ತದೆ. ಆ ವೈಭವದ ಹಿಂದಿನ ಸಾಮಾಜಿಕ ಆಯಾಮಗಳನ್ನು ಕಲ್ಪಿಸಿಕೊಳ್ಳಲು ಹೆಚ್ಚು ವಿದ್ವತ್ತು ಬೇಕಾಗಿಲ್ಲ. ನಂತರದಲ್ಲಿ ಚಾಲುಕ್ಯರ ಕಾಲದ ವಾಣಿಜ್ಯ ವ್ಯವಹಾರದ ಕಾರಣದಿಂದಾಗಿ ಪರಿಚಿತಗೊಂಡ ಹೊಸ ಬೆಳೆಗಳ ಆವಿಷ್ಕಾರ, ಕಬ್ಬಿಣದ ಲಭ್ಯತೆಯಿಂದಾಗಿ ಕೃಷಿಯಲ್ಲಿ ಹೊಸ ತಂತ್ರಜ್ಞಾನದ ಸೇರ್ಪಡೆ, ಮಹಾನ್ ಸಾಮ್ರಾಜ್ಯಗಳ ಪತನದಿಂದಾಗಿ ಸಣ್ಣ ಸಣ್ಣ ಅದರಲ್ಲೂ ಶೂದ್ರ ರಾಜರುಗಳ ಉದಯ,

ಇದರಿಂದ ಸೈನಿಕ ಅವಶ್ಯಕತೆಗಳಿಗಾಗಿ ಕುಶಲಕರ್ಮಿಗಳ ಮೇಲೆ ಪ್ರಭುತ್ವದ ಅವಲಂಬನೆ, ಶಿಕ್ಷಣ, ಆರೋಗ್ಯ, ಭೂಮಿ ಇವುಗಳ ಮೇಲಿನ ಖಾಸಗಿಯವರ ಹಿಡಿತ, ಸದಾ ಯುದ್ಧದ ಭಯ ಮತ್ತು ಅದನ್ನು ಎದುರಿಸಬೇಕಾದ ಮನಸ್ಥಿಯ ಸಾಮಾಜಿಕ ಸ್ವರೂಪ, ಹೆಚ್ಚುತ್ತಲೇ ಹೋದ ತೆರಿಗೆಯ ಭಾರ, ಬಿಟ್ಟಿಯೂಳಿಗದ ವ್ಯಾಪಕತೆ, ದೇವಾಲಯ, ಮಠ, ಅಗ್ರಹಾರಗಳಿಗೆ ಹೆಚ್ಚಾದ ಉಂಬಳಿಯ ಪ್ರಮಾಣ, ಜೊತೆಗೆ ಇವೆಲ್ಲವುಗಳು ತೆರಿಗೆ ಮುಕ್ತವಾದುದರ ಪರಿಣಾಮ ಬೊಕ್ಕಸದ ಮೇಲಿನ ಹೊರೆಯನ್ನು ಜನರ ಮೇಲೆ ಹಾಕಿದ್ದು, ರಾಜರ ಪರಿವಾರ ಹಾಗು ಅಧಿಕಾರ ವರ್ಗದವರ ದಲ್ಲಾಳಿತನ, ಬಡತನದ ಜೊತೆಗೆ ಜೋತಿಷ್ಯ, ವಾಸ್ತು, ಶಕುನ ಇವುಗಳ



ವ್ಯಾಪಕತೆ, ಕನ್ನಡ ಶಾಸನಗಳಲ್ಲಿ ನಿಧಾನವಾಗಿ ಮರೆಯಾದ ಸಂಸ್ಕೃತ, ಎಲ್ಲಕ್ಕಿಂತಲೂ ಮುಖ್ಯವಾಗಿ ದಕ್ಷಿಣ ಭಾರತವೆಂಬ ವರ್ಣವ್ಯವಸ್ಥೆಯ ವಿರುದ್ಧದ ಭೂಪ್ರದೇಶ, ಈ ಭಾಗದ ದೇಹಮೀಮಾಂಸೆಯ ತಾತ್ವಿಕ ಪರಿಕಲ್ಪನೆಯ ತಳಹದಿ, ರಾಜ ಮತ್ತು ಕವಿಗಳು ಸೇರಿ ನಡೆಸಿದ ಪೊಲಿಟಿಕಲ್ ಫಿಲಾಸಫಿಯ ಪರಂಪರೆ (ಶ್ರೀವಿಜಯ–ನೃಪತುಂಗ, ಪಂಪ–ಅರಿಕೇಸರಿ, ಇರಿವಬೆಡಂಗ–ರನ್ನ) ಮುಂತಾದ ನಮ್ಮ ಗಣನೆಗೂ ನಿಲುಕದ ಸಂಗತಿಗಳು ಇಲ್ಲಿ ಕೆಲಸಮಾಡಿವೆ.

**೨. ಶರಣರ ಸಮುದಾಯದ ಪರಿಕಲ್ಪನೆ ಯಾವುದು? ಅದಕ್ಕೊಂದು ಸಮಗ್ರತೆ ಇದೆಯೇ?**

**ಉತ್ತರ:** ಒಳಗೊಳ್ಳುವ ತಾತ್ವಿಕತೆಯೇ ಅವರ ಸಮುದಾಯ ಪರಿಕಲ್ಪನೆಯ ಮುಖ್ಯ ತಳಹದಿಯಾಗಿದೆ. ಈ ಸಮಗ್ರತೆಯೆನ್ನುವುದು ಆಯಾ ಕಾಲದ ಸಾಪೇಕ್ಷ ವಿಶ್ಲೇಷಣೆಯಲ್ಲಿ ಅರ್ಥೈಸಲ್ಪಡುವುದರಿಂದ ಅವರ ಕಾಲಕ್ಕೆ ಅದು ಸಮಗ್ರವೆಂದು ಹೇಳಬಹುದು.

**೩. ಲಿಂಗನ್ಯಾಯದ ಪರಿಕಲ್ಪನೆ ಶರಣರಲ್ಲಿ ಸ್ಪಷ್ಟವಾಗಿ ಬೇರೂರಿತ್ತು ಎಂದು ನಿಮಗನಿಸುತ್ತದೆಯೇ?**

**ಉತ್ತರ:** ಈ ಸ್ಪಷ್ಟತೆಯೆನ್ನುವುದು ಕಾಲಕಾಲಕ್ಕೆ ಬದಲಾಗುತ್ತಲೇ ಇರುವ ನಿರಂತರ ಪ್ರಕ್ರಿಯೆ. ಹಾಗೆ ನೋಡಿದರೆ ಲಿಂಗನ್ಯಾಯವೆನ್ನುವುದು ಎಲ್ಲ ಕಾಲದಲ್ಲೂ ಆಗುತ್ತಲೇ ಇರುವ ಪೂರ್ಣತೆಯತ್ತ ಸಾಗುವ ಕ್ರಿಯೆಯೆನಿಸುತ್ತದೆ. ಇದನ್ನು ಕೋರ್ಟ್‌ನ ರೀತಿಯಲ್ಲಿ ಹೌದು ಅಥವಾ ಇಲ್ಲ ಎಂದು ಉತ್ತರಿಸಲಾಗುವುದಿಲ್ಲ.

**೪. ವಚನಕಾರ್ತಿಯರ ಹೋರಾಟಕ್ಕೆ ಪ್ರತ್ಯೇಕ ಅಸ್ತಿತ್ವ ಇದೆಯೇ?**

**ಉತ್ತರ:** ಹೆಣ್ಣು ಬಿಟ್ಟು ಲಿಂಗವನೊಲಿಸಬೇಕೆಂಬರು ಹೆಣ್ಣಿಂಗೆಯೂ ಲಿಂಗಕ್ಕೆಯೂ ವಿರುದ್ಧವೇ ಎಂದು ಕೇಳುವ ವಚನಕಾರ್ತಿಯರು ಚಳುವಳಿಯ ಭಾಗವೇ ಆಗಿದ್ದರು. ಈ ಪ್ರತ್ಯೇಕ ಅಸ್ತಿತ್ವವೆಂಬುದು ಆ ಕಾಲದಲ್ಲಿ ನಾವು ಕೇಳುವ ರೀತಿಯಲ್ಲಿ ಇರಲಿಲ್ಲವೆನ್ನಬಹುದೇನೊ.

**೫. ನಿಮಗೆ ಪ್ರಿಯರಾದ ವಚನಕಾರರು ಹಾಗೂ ವಚನಕಾರ್ತಿಯರನ್ನು ಕುರಿತು ವಿವರವಾಗಿ ಹೇಳಿ.**

**ಉತ್ತರ:**ಹಾಗೆ ಕ್ಯಾಟಗರಿಕಲಿ ಈ ಪ್ರಶ್ನೆಗೆ ಉತ್ತರಿಸುವುದು ಸ್ವಲ್ಪ ಕಷ್ಟದ ಕೆಲಸ. ನೂರಾರು ವಿಧದ ಹೂವಿನ ತೋಟದೆದುರು ನಿಂತು ಯಾವುದಾದರೂ ಹೂ ಆರಿಸಿಕೊ ಎಂದಾಗ ಆಗುವಂಥ ಕಸಿವಿಸಿ, ಏಕೆಂದರೆ ವೈವಿಧ್ಯ ಹೆಚ್ಚಿದಷ್ಟೂ ಸೌಂದರ್ಯ, ರೋಗನಿರೋಧಕ ಶಕ್ತಿ, ಬಾಳಿಕೆ, ಸ್ವಾದ, ಸತ್ವ ಹೆಚ್ಚುತ್ತದೆನ್ನುವುದು ಈಗಾಗಲೇ ಎಲ್ಲರಿಗೂ ತಿಳಿದ ಸಂಗತಿ. ಆದರೂ ಉರಿಲಿಂಗಪೆದ್ದಿ, ಕಾಳವ್ವೆ, ಅಕ್ಕಮ್ಮ ಮುಂತಾದವರು ಒಳಗನ್ನು ಬೆದಕುತ್ತಾರೆ.

**೬. ಹೆಣ್ಣು ಮತ್ತು ಆರ್ಥಿಕ ಸ್ವಾವಲಂಬನೆಯ ಹೊಳಹುಗಳನ್ನು ವಚನಕಾರ್ತಿಯರಲ್ಲಿ ಗುರುತಿಸಲು ಸಾಧ್ಯವಿದೆಯೇ?**

**ಉತ್ತರ:** ಸಾಧ್ಯವಿದೆಯೆಂದೇ ವಿಚಾರಪತ್ನಿ, ದುಗ್ಗಳೆಯ ತಂದು ಆನು ಬದುಕಿದೆನು, ಕಾಯಕ ನಿಂದಿತ್ತು ಹೋಗು  ಎನ್ನುವಂತಹ ಸ್ವಾವಲಂಬಿ ಮಾತುಗಳನ್ನು ಕಾಣುತ್ತೇವೆ.

**೭. ಸಹಿಷ್ಣುತೆಯನ್ನು ಶರಣ ಚಳುವಳಿಯ ಆಶಯ ಎಂದು ಹೇಳಲು ಸಾಧ್ಯವಿದೆಯೇ?**

**ಉತ್ತರ:** ಇವನಾರವ ಇವನಾರವ ಎಂಬುದರ ಮೂಲಕ ಅದು ಮಾತನಾಡಲಿಲ್ಲ, ಸಂಬೋಳಿ ನಾಗಿದೇವನ ಮನೆಯಲ್ಲಿ ಉಣ್ಣುವ ಮೂಲಕ, ಅಂತರಜಾತಿ ವಿವಾಹವನ್ನು ಮಾಡುವುದರ ಮೂಲಕ ಅದನ್ನು ಹೇಳಿತು.

**೮. ವಚನಗಳ ಕಾವ್ಯ ಸೌಂದರ್ಯವನ್ನು ಕುರಿತು ಹೇಳಿ.**

**ಉತ್ತರ:** ವಚನಗಳು ಕಾವ್ಯಗಳಲ್ಲ ಎಂದು ಮೊನ್ನೆ ಮೊನ್ನೆಯವರೆಗೂ ವಾದಿಸಿದ ಉದಾಹರಣೆಗಳಿವೆ. ಕಾವ್ಯ ಎಂದರೆ ಏನು ಎಂಬ ಪ್ರಶ್ನೆಗೆ ಇದು ನಮ್ಮನ್ನು ಕರೆದೊಯ್ಯುತ್ತದೆ. ಬದುಕನ್ನು ಹಸನು ಮಾಡುವ ನೆಲೆಯಲ್ಲಿ ವಚನಗಳ ಸೌಂದರ್ಯಕ್ಕೆ ಸಾಟಿಯಿಲ್ಲ. ಸಮಾಜಕ್ಕೆ ಕೇಡಿಲ್ಲದಂತೆ ಹಾಡಿದ ಅವು ಯುಟಿಲಿಟಿ ಈಜ್ ದಿ ಬ್ಯೂಟಿ ಎನ್ನುವುದನ್ನು ಸಾರುತ್ತವೆ.

**೯. ಶರಣ ಚಳುವಳಿಯಲ್ಲಿ ನಿಮಗೆ ಅತ್ಯಂತ ಪ್ರಿಯವಾದ ಅಂಶಗಳು ಯಾವುವು?**

**ಉತ್ತರ:** ಕಾಯಕ, ವರ್ಣಭೇದದ ವಿರುದ್ಧದ ನಿಲುವು, ಸ್ವರ್ಗ ನರಕದ ಪರಿಕಲ್ಪನೆ, ಕರ್ಮ ಸಿದ್ಧಾಂತದ ಬಗೆಗಿರುವ ನಿಲುವು, ದೇವರು, ಧರ್ಮ, ದೇವಾಲಯ, ಮದುವೆ, ಸೂತಕ, ಪಾಪ ಪುಣ್ಯ, ಅರಿವು ಕುರುಹು, ಬಯಲು ಆಲಯ, ಪ್ರಸಾದ, ದೇಹ, ಭಾಷೆಯ ಕುರಿತ ಸ್ಪಷ್ಟತೆ, ಛಂದಸ್ಸು, ವ್ಯಾಕರಣ, ಪ್ರಭುತ್ವ ಮತ್ತು ಜನತೆಯ ತತ್ವಜ್ಞಾನದ ಅರಿವು, ಅದನ್ನು ಆಗು ಮಾಡುವಲ್ಲಿ ಇರಬಾಕಾದ ಬದ್ಧತೆ ಮುಂತಾದವು.

**೧೦. ವಚನಕಾರರನ್ನು ಮಾದರಿಯಾಗಿ ನೋಡುವುದರ ಬಗ್ಗೆ ನಿಮ್ಮ ಆಲೋಚನೆಗಳು**

**ಉತ್ತರ:** ದೇವನೂರು ಮಹಾದೇವ ಸರ್ ಅವರ ಈ ಮಾತು ನನಗೆ ನೆನಪಾಗುತ್ತದೆ. ವಚನ ಆಂದೋಲನ ಇಡೀ ಜಗತ್ತಿನಲ್ಲಿ ಹುಡುಕಿದರೂ ಸಿಗುವುದಿಲ್ಲ. ಆ ಥರದ ಒಂದು ಪ್ರಯೋಗ ಕರ್ನಾಟಕದಲ್ಲಿ ಆಗಿದೆ. ವಚನ ನನಗೆ ಹಳೆಯದು ಎನಿದುವುದಿಲ್ಲ ನಮ್ಮ ನಾಳಿನ ಕಾವ್ಯ ಎನಿಸುತ್ತದೆ."

*ಪ್ರೊಫೆಸರ್, ಕನ್ನಡ ಇಲಾಖೆ, ಕರ್ನಾಟಕದ ಕೇಂದ್ರ ವಿಶ್ವವಿದ್ಯಾಲಯ ಕಡಗಂಚಿ – ೫೮೫೩೬೭*
*ಕಲಬುರಗಿ, ೯೨೪೨೮ ೬೩೯೦೮*

ಜಾತಿ ಸೂತಕ ಬಿಡದು ಜನನ ಸೂತಕ ಬಿಡದು
ಪ್ರೇತಸೂತಕ ಬಿಡದು ರಜಸ್ಸೂತಕ ಬಿಡದು ಎಂಜಲು ಸೂತಕ ಬಿಡದು
ಭ್ರಾಂತು ಸೂತಕ ಬಿಡದು ವರ್ಣಸೂತಕ ಬಿಡದು
ಇವರೆಂತು ಭಕ್ತರಹರು
ಹೂಸಿ ಹುಂಡನ ಮಾಡಿದಲ್ಲಿ ಬಾಯಿಗೆ ಬೆಲ್ಲವ ತೊಡೆದಲ್ಲಿ
ಸದ್ಗುರು ಲಿಂಗವು ಮೂಗಕೊಯ್ಯದೆ ಮಾಬನೆ
ಕಾಡುಕಿಚ್ಚಿನ ಕೈಯಲ್ಲಿ ಕರಡದಹುಲ್ಲ ಕೊಯ್ಸಿದಂತಿರಬೇಕು ಭಕ್ತಿ
ಹಿಂದೆ ಮೆದೆಯಿಲ್ಲ ಮುಂದೆ ಹುಲ್ಲಿಲ್ಲ
ಇದು ಕಾರಣ ಚೆನ್ನಸಂಗನ ಭಕ್ತಿಸ್ಥಲ
ನಿಮ್ಮ ಶರಣಂಗಲ್ಲದೆ ಅಳವಡದು.

– ಚೆನ್ನಬಸವಣ್ಣ



## ವಚನ–ವೈಚಾರಿಕತೆ–ವೈಜ್ಞಾನಿಕ ಮನೋಭಾವ

**ಸುಮಂಗಲಾ ಎಸ್. ಮುಮ್ಮಿಗಟ್ಟಿ**

ಹನ್ನೆರಡನೆಯ ಶತಮಾನದ ಶರಣರು ಕಟ್ಟಿದ ಸಮಾಜದ ರಚನೆಯನ್ನು ನೋಡಿದಾಗ, ಒಮ್ಮೊಮ್ಮೆ ದಿಗ್ಭ್ರಮೆಯಾಗುತ್ತದೆ. ಇಂದಿಗೂ ನಮ್ಮ ಸಮಾಜದಲ್ಲಿ ಇರುವ ಹಲವು ಸಾಮಾಜಿಕ ಪಿಡುಗುಗಳನ್ನು ಗಮನಿಸಿದಾಗ ೯೦೦ ವರ್ಷಗಳ ಹಿಂದೆ ಪರಿಸ್ಥಿತಿ ಹೇಗಿದ್ದಿರಬಹುದು? ಅಂತಹ ಪರಿಸ್ಥಿತಿಯಲ್ಲಿ ವೈಜ್ಞಾನಿಕ ತಳಹದಿಯ ಮೇಲೆ ಸಮಾನ ಭಾವದ, ಸಮತೋಲನದ ಸಮಾಜವನ್ನೂ, ಆರ್ಥಿಕ ಸಂತೃಪ್ತಿಯನ್ನೂ ಜನರಲ್ಲಿ ಮೂಡಿಸಲು ಅವರಿಗೆ ಸಾಧ್ಯವಾದುದಾರೂ ಹೇಗೆ? ಎಂದು ಅಚ್ಚರಿಯಾಗುತ್ತದೆ. ಕಾಯಕ ತತ್ವದ ಆಧಾರದ ಮೇಲೆ ನಡೆಯುತ್ತಿದ್ದ ಅಂದಿನ ಸಮಾಜಕ್ಕೆ ಏನೆಲ್ಲ ಬೇಕೋ ಅದೆಲ್ಲವೂ ಅಲ್ಲಿತ್ತು! ಅನ್ನ, ಅರಿವೆ, ಅರಿವು, ಆರೋಗ್ಯ, ಅದರೊಂದಿಗೆ ಮನೋರಂಜನೆಯೂ ಕೂಡಾ. ಇವೆಲ್ಲಕ್ಕೂ ಆಯಾ ಕಾಯಕವನ್ನು ನಿಷ್ಠೆಯಿಂದ ಮಾಡುವ ಶರಣರಿದ್ದರು. ಯಾವ ಕಾಯಕವೂ ಶ್ರೇಷ್ಟವಲ್ಲ ಯಾವುದೂ ಕೀಳಲ್ಲ, ಸಂಗ್ರಹ ನಿಶಿದ್ಧವಾದ್ದರಿಂದ ಆರ್ಥಿಕ ಸಂತೃಪ್ತಿ ಅಲ್ಲಿತ್ತು. ಅವರಿಗಿದ್ದ ಜ್ಞಾನದ ಆಳವನ್ನು ಇಂದಿಗೂ ಅವರ ವಚನಗಳಿಂದ ಅರಿಯಬಹುದಾಗಿದೆ.

ನಗೆ ಮಾರಿ ತಂದೆಯ ವಚನವನ್ನು ಅದರಲ್ಲಿರುವ ವೈಚಾರಿಕತೆಯನ್ನು ಅರಿಯುವ ಪ್ರಯತ್ನವನ್ನು ಮಾಡೋಣ. ನಗೆ ಮಾರಿತಂದೆ, ಹಾಸ್ಯದ ಮುಖಾಂತರ ಶರಣರ ಮನೋರಂಜನೆಯನ್ನು ಒದಗಿಸುವ ಕಾಯಕವನ್ನು ಕೈಗೊಂಡಿದ್ದ. ಅದು ಆರೋಗ್ಯಯುತವಾದ ಹಾಸ್ಯ, ಹಾಸ್ಯದ ಮುಖಾಂತರ ಮುಮುಕ್ಷುಗಳ ಅರಿವನ್ನು ಹೆಚ್ಚಿಸುವ ಹಾಸ್ಯ. ಈ ವಚನದಲ್ಲಿ *ನಗೆಯ ಮಾರಿ ತಂದೆ* ಏನನ್ನು ಹೇಳ ಬಯಸುತ್ತಾನೆ ಎನ್ನುವುದನ್ನು ಗಮನಿಸೋಣ.

**ಬೀಜವೊಡೆದು ಮೊಳೆಯಂಕುರಿಸುವಾಗಎಲೆ ಎಲ್ಲಿದ್ದಿತ್ತು?**
**ಎಲೆ ಸುಳಿಬಿಟ್ಟು ಕವಲುವಾಗ ಶಾಖೆಯೆಲ್ಲಿದ್ದಿತ್ತು?**
**ಶಾಖೆ ಒಡೆದು ಕುಸುಮ ತೋರುವಾಗ ಫಲವೆಲ್ಲಿದ್ದಿತ್ತು?**
**ಫಲ ಬಂದು ರಸ ತುಂಬುವಾಗ ಸವಿಯೆಲ್ಲಿದ್ದಿತ್ತು?**
**ಸವಿಯ ಸವಿದು ಪರಿಣತೆಗೊಂಬಾಗ ಅದೇತರೊದಗು?**
**ಇಷ್ಟರ ನೀತಿಯನರಿ, ಆತುರ ವೈರಿ ಮಾರೇಶ್ವರಾ**

ಶರಣರು ಯಾವುದೇ ವಿಷಯಗಳನ್ನು ಹೇಳುವಾಗ ಗೊತ್ತಿರುವುದರಿಂದ ಗೊತ್ತಿಲ್ಲದುದರ ಕಡೆಗೆ (From known to unknown) ವಿಸ್ತರಿಸುತ್ತ ಹೋಗುತ್ತಾರೆ. ಇದಕ್ಕಾಗಿ ದೃಷ್ಟಾಂತಗಳನ್ನು ಸಹ ಬಳಸುತ್ತಾರೆ. ಇದು ಒಂದು ವೈಜ್ಞಾನಿಕ ವಿಧಾನವೂ ಹೌದು. ಅದೇ ವಿಧಾನವನ್ನು ಇಲ್ಲಿ ನಗೆಯಮಾರಿತಂದೆ ಬಳಸಿರುವುದನ್ನು ಕಾಣುತ್ತೇವೆ.

ಬೀಜವೊಂದನ್ನು ಮಣ್ಣಿಗೆ ಬಿತ್ತಿದಾಗ, ಅದು ಒಡೆದು ಮೊಳಕೆ ಬರುತ್ತದೆ.

ಮೊಳಕೆಯೊಡೆಯುವುದಕ್ಕೂ ಮುನ್ನ ಅದು ಮಣ್ಣಿನಲ್ಲಿರುವ ನೀರಿನಂಶವನ್ನು ಹೀರಿಕೊಂಡು, ಅದರ ಹೊರಪದರ ಉಬ್ಬುತ್ತದೆ. ಹಾಗೆ ನೀರನ್ನು ಹೀರಿಕೊಳ್ಳಲು ಆಪದರ ಸೂಕ್ತವಾಗಿರಬೇಕು (ಕಜಡಿಟಜಚಿಭಟಜ) ಅದಾದ ನಂತರ ಬೀಜದ ಬೇರಾಗುವ ಭಾಗ (ಖಚಿಜುಭಿಟಜ) ಮಣ್ಣಿನಾಳಕ್ಕಿಳಿದು ಮಣ್ಣಿನಲ್ಲಿರುವ ನೀರು ಮತ್ತು ಪೋಷಕಾಂಶಗಳನ್ನು ಹೀರಿಕೊಂಡು ಬೀಜಕ್ಕೆ ಒದಗಿಸುತ್ತದೆ. ಅದನ್ನು ಪಡೆದುಕೊಂಡು ಬೀಜದ ಕಾಂಡವಾಗುವ ಭಾಗ (ಕಟಣ-ಟಣಟಜ) ಹೊರ ಬರುತ್ತದೆ. ಅದು ಬರುವ ಮುನ್ನ ಎಲೆ ಎಲ್ಲಿತ್ತು? ಎನ್ನುವುದು ತಿಳಿಯುವುದಿಲ್ಲ.

ಎಲೆ ನಿಧಾನವಾಗಿ ಸುಳಿ ಬಿಟ್ಟು ಗಾಳಿ, ಸೂರ್ಯನ ಶಕ್ತಿ ಮತ್ತು ನೀರಿನ ಸಹಾಯದೊಂದಿಗೆ ಬೆಳೆದು ಕವಲೊಡೆಯುತ್ತದೆ. ಆನಂತರ ಅದು ಶಾಖೋಪಶಾಖೆಗಳಾಗಿ ಬೆಳೆಯುತ್ತದೆಯಾದರೂ ಕವಲಿನಲ್ಲಿ ಅದು ಮೊದಲು ಗೋಚರಿಸುವುದೇ ಇಲ್ಲ.ಅದೇ ಶಾಖೆಗಳಲ್ಲಿ ಹೂವರಳುವಾಗ ಅದು ಮುಂದೆ ಕಾಯಾಗುವ ಯಾವ ಕುರುಹನ್ನೂ ತೋರುವುದಿಲ್ಲ. ಅದೇ ಕಾಯಿ ತನ್ನ ಮೊದಲ ರುಚಿಯನ್ನು ಬದಲಿಸಿಕೊಂಡು ರಸ ತುಂಬಿ ಸಿಹಿಯಾದ ಹಣ್ಣಾಗುವ ಪ್ರಕ್ರಿಯೆಯಲ್ಲಿ ಆ ಸಿಹಿ ಬಂದದ್ದು ಎಲ್ಲಿಂದ? ಪಕ್ವಗೊಂಡ ಆ ಹಣ್ಣನ್ನು ಸವಿದಾಗ ದೊರಕುವ ಆ ಪರಿಣತೆ ಅಥವಾ ಸಂತೃಪ್ತಿಯ ಒದಗುವಿಕೆ ಬಂದದ್ದು ಎಲ್ಲಿಂದ? ಎಂದು ಪ್ರಶ್ನಿಸುವ ಮಾರಿತಂದೆ ಕೊನೆಯ ಸಾಲಿನಲ್ಲಿ ಇಷ್ಟರ ಅಂದರೆ ಇದುವರೆಗೆ ಹೇಳಿದುದರ ನೀತಿಯನ್ನು ತಿಳಿ ಎನ್ನುವ ಅದೇಶವನ್ನು ನೀಡುತ್ತನೆ.

ಹಾಗಾದರೆ ಶರಣ ನಗೆಯ ಮಾರಿ ತಂದೆ ಕೇವಲ ಬೀಜ ಮೊಳಕೆಯೊಡೆದು ಎಲೆ, ಹೂವು, ಕಾಯಿ ಫಲವಾದ ಬಗೆಯನ್ನು ನಮಗೆ ಇಲ್ಲಿ ಹೇಳಬಯಸಿದ್ದನೆಯೇ? ಈ ಪ್ರಕ್ರಿಯೆಯ ಹಿಂದಿರುವ ವಿಜ್ಞಾನದ ಅರಿವು ಆಗಿನ ಜನರಿಗಿರದಿದ್ದರೂ ಅದು ನಡೆವ ಪರಿ ಮತ್ತು ತೆಗೆದುಕೊಳ್ಳುವ ಅವಧಿಯ ಅರಿವು ಅವರಿಗಿತ್ತು. ಈಗಿನಂತೆ ಅಂದು ಕೃತಕ ಗೊಬ್ಬರ ಅಥವಾ ಹಣ್ಣಾಗಿಸುವ ರಾಸಾಯನಿಕಗಳಾಗಲೀ ಇರಲಿಲ್ಲ. ಹಾಗೆಂದಾಗ ಇಲ್ಲಿ ಆತುರ ಬೇಡ ಎಂಬ ಸಂದೇಶವನ್ನು ಮಾತ್ರ ಕೊಡ ಬಯಸಿದ್ದನೇ? ನಗೆಯ ಮಾರಿತಂದೆ ಕಣ್ಣಿಗೆ ಗೋಚರಿಸುವ ಇದನ್ನು ಬಳಸಿಕೊಂಡು ಅಧ್ಯಾತ್ಮಿಕ ಬದುಕಿನ ವಿಧಾನವನ್ನು ನಮ್ಮ ಮುಂದಿಡಲು ಬಯಸಿದ್ದಾನೆ ಎಂದು ತೋರುತ್ತದೆ.

ಇದಕ್ಕೆ ಆಧಾರವಾಗಿ ನಾವು ಬಸವಣ್ಣನವರ ಈ ವಚನವನ್ನು ಗಮನಿಸಬಹುದು.

**ಭಕ್ತಿಯೆಂಬ ಪೃಥ್ವಿಯ ಮೇಲೆ, ಗುರುವೆಂಬ ಬೀಜವಂಕುರಿಸಿ,**
**ಲಿಂಗವೆಂಬ ಎಲೆಯಾಯಿತ್ತು.**
**ಲಿಂಗವೆಂಬ ಎಲೆಯ ಮೇಲೆ,**
**ಆಚಾರವೆಂಬ ಕಾಯಾಯಿತ್ತು.**
**ನಿಷ್ಪತ್ತಿಯೆಂಬ ಹಣ್ಣು ತೊಟ್ಟು ಕಳಚಿ ಬೀಳುವಲ್ಲಿ**
**ಕೂಡಲಸಂಗಮದೇವ ತನಗೆ ಬೇಕೆಂದು ಎತ್ತಿಕೊಂಡ.**

ಅಂಗಭಾವವನ್ನು ತೊಡೆದು ಲಿಂಗಭಾವವನ್ನು ಅಳವಡಿಸಿಕೊಳ್ಳುವುದೇ ಶರಣರ ಬದುಕಿನ ಗುರಿಯಾಗಿತ್ತು. ಅದಕ್ಕಾಗಿ ವ್ಯಕ್ತಿ ಮೊದಲು ಭಕ್ತನಾಗಬೇಕು ಆ ಭಕ್ತನ ಮನಸ್ಸೆಂಬ ಮಣ್ಣಿನ ಮೇಲೆ ಗುರುಕರುಣೆಯ ಬೀಜ ಅಂಕುರಿಸಿದಾಗ ಲಿಂಗವೆಂಬ ಎಲೆಯಾಗುತ್ತದೆ. ಆದರೆ ಅದಕ್ಕೆ ಅದು ತನ್ನದೇ ಆದ ಪ್ರಕ್ರಿಯೆ ಮತ್ತು ಸಮಯವನ್ನುತೆಗೆದುಕೊಳ್ಳುತ್ತದೆ. ಅದು ಪೂರ್ಣಗೊಳ್ಳುವವರೆಗೆ ಎಲೆ ಎಲ್ಲಿತ್ತು? ಎನ್ನುವುದು ಗೋಚರಿಸುವುದಿಲ್ಲ. ಹಾಗೆಯೇ ಎಲೆ



ಕವಲೊಡೆದು ಶಾಖೆಗಳಾಗಿ ಲಿಂಗಾಂಗಿಯಾಗುವ ಮುನ್ನ ಅಳವಟ್ಟುಗೊಳ್ಳುವ ಹಂತಗಳನ್ನು ಹಾಯ್ದು, ಅಂದರೆ ಹೂತಳೆದು ಕಾಯಾಗುತ್ತದೆ. ಆ ಕಾಯಿ ಒಗರು ಹುಳಿಗಳೆಲ್ಲವನ್ನು ಕಳೆದುಕೊಂಡು ಸಿಹಿಯಾದ ಹಣ್ಣಾಗುವ ಮೊದಲು ಅದರ ಸ್ವಾದದ ಅರಿವು ಹೇಗೆ ಆಗುವುದಿಲ್ಲವೋ ಹಾಗೆಯೇ ಅಂಗ ಭಾವವನ್ನು ಸಂಪೂರ್ಣವಾಗಿ ಕಳೆದು ಕೊಳ್ಳುವ ಮೊದಲು, ಮನದ ಕಾಳಿಕೆಯೆಂಬ ಎಲ್ಲ ಹುಳಿ ಒಗರುಗಳನ್ನು ಕಳೆದುಕೊಂಡು ಪೂರ್ಣತ್ವದ ಫಲವಾದ "ಲಿಂಗ" ವಾಗುವಿಕೆಯ ಭಾವದ ಅರಿವಿರುವುದಿಲ್ಲ. ಅದಾದ ನಂತರ ಆ ಹಣ್ಣಿನ ಆ ಪರಿಪಕ್ವತೆಯನ್ನು, ಪರಿಣತೆಯನ್ನು ಅನುಭವಿಸಿ "ಲಿಂಗ ಸಿದ್ಧಿಯನ್ನು" ಆಸ್ವಾದಿಸುತ್ತಾನೆ. ಹೀಗಾದಾಗ ಅವನು ತನ್ನ ಜೀವನದ ಎಲ್ಲ ಚಟುವಟಿಕೆಗಳನ್ನು ಲಿಂಗಭಾವದಿಂದಲೇ ಅನುಭವಿಸುತ್ತಾನೆ.

ಹೇಗೆ ಬೀಜವೊಂದನ್ನು ನೋಡಿದಾಗ ಅದು ತನ್ನೊಳಗೆ ಇಂಬಿಟ್ಟುಕೊಂಡಿರುವ ಎಲೆ ಕವಲು ಹೂವು ಕಾಯಿ ಹಣ್ಣುಗಳು ಗೋಚರಿಸುವುದಿಲ್ಲವೋ ಹಾಗೆಯೇ ವ್ಯಕ್ತಿಯೊಬ್ಬನನ್ನು ನೋಡಿದಾಗ ಅವನು "ಅಂಗ" ಭಾವದಲ್ಲಿದ್ದಾಗ ಅವನ ಅರಿವಿನ ಹರಹು ತೋರುವುದಿಲ್ಲ ಆದರೆ ಸಂಸ್ಕಾರ ಮತ್ತು ಸಮಯ ದೊಂದಿಗೆ ವ್ಯಕ್ತಿಯ ಸಾಧನೆಯೂ ಸೇರಿ ಒಂದೊಂದೇ ಹಂತವನ್ನು ಅವನು ದಾಟುತ್ತಾನೆ ಆ ಹಾದಿಯಲ್ಲಿ ಪ್ರತಿ ಹಂತದಲ್ಲಿ ಮುಂದಿನ ಹಂತ ಅಡಗಿದ್ದರೂ ಅದು ಕಣ್ಣಿಗೆ ಕಂಡು ಬರುವುದಿಲ್ಲ ಅದನ್ನು ತಲುಪಲು ಅವನು ತಾಳ್ಮೆಯಿಂದ ಕಾಯಬೇಕಾಗುತ್ತದೆ. ಈ ನೀತಿಯನ್ನು ಅರಿಯಬೇಕು ಎಂದು ನಗೆಯ ಮಾರಿತಂದೆ ತನ್ನ ವಚನದಲ್ಲಿ ಹೇಳಿದ್ದಾನೆ.

ನಗೆಯ ಮಾರಿತಂದೆ ತನ್ನ ವಚನದಲ್ಲಿ ಈ ರೀತಿಯ ದೃಷ್ಟಾಂತಗಳನ್ನು ಕೊಟ್ಟು ತನ್ನ ಸುತ್ತಲಿನ ಸಾಧನೆಯ ಹಾದಿಯಲ್ಲಿರುವವರಿಗೆ ಮಾರ್ಗದರ್ಶನವನ್ನು ಮಾಡುವುದರ ಜೊತೆಜೊತೆಗೇ ಬೀಜವೊಂದು ಹೇಗೆ ಫಲದ ಹಂತದವರೆಗೆ ತಲುಪುವವರೆಗೆ ಹಲವಾರು ಪ್ರಕ್ರಿಯೆಗಳಿಗೆ ಒಳಗಾಗಬೇಕಾಗುತ್ತದೋ, ಹಾಗೆಯೇ ಭಕ್ತನೊಬ್ಬ ಹಲವು ಸಂಸ್ಕಾರಗಳಿಗೆ (ಇಲ್ಲಿ ಸಂಸ್ಕಾರ ಎಂದರೆ ದೈಹಿಕ ಸಂಸ್ಕಾರವಲ್ಲ. ಅದು ಲಿಂಗಾನುಸಂಧಾನದಿಂದ ಅಳವಡುವ ಭಾವ) ಒಳಗಾಗಿ ತಾಳ್ಮೆಯಿಂದ ಮುಂದುವರೆದಾಗ ಮಾತ್ರ ತನ್ನ ಅಂತಿಮ ಗುರಿಯನ್ನು ತಲುಪಬಲ್ಲ ಮಾತ್ರವಲ್ಲ ಹೇಗೆ ಫಲವೊಂದು ರಸಭರಿತವಾಗಿ ರುಚಿಯಾಗಿರುತ್ತದೆಯೋ ಹಾಗೆಯೇ ಬದುಕು ಕೂಡಾ ಅನುಭಾವದ ಆನಂದದಿಂದ ಕೂಡಿರುತ್ತದೆ ಎಂದು ಹೇಳಬಯಸುತ್ತಾನೆ. ಸ್ವಸ್ಥ ಸಮಾಜ ನಿರ್ಮಾಣದ ಶರಣರ ಈ ವೈಚಾರಿಕತೆ ಅಚ್ಚರಿಯನ್ನು ಉಂಟು ಮಾಡುತ್ತದೆ ಎಂದರೆ ಉತ್ಪ್ರೇಕ್ಷೆಯೆನಿಸಲಾರದು.

*ನಂ. ೩೦೨/೨೫, ಜೇನುಕಲ್ ಪ್ಯಾರಡೈಸ್, ಪೈಪ್‌ಲೈನ್ ರಸ್ತೆ, ಕರ್ನಾಟಕ ಲೇಔಟ್, ೧ನೇ ಹಂತ, ಬೆಂಗಳೂರು -೫೬೦ ೦೭೬ ೯೪೭೧೦ ೩೫೯೭೩*

ಶುದ್ಧತೆ ಇರುವಲ್ಲಿ ಬದ್ಧತೆ ಇರಲಿಕ್ಕೇಬೇಕು. ಎಡರೂ ಅನ್ಯೋನ್ಯ ಭ್ರಷ್ಟರು ಸುಲಭವಾಗಿ ಸಿಗುತ್ತಾರೆ. ಬದ್ಧರು ಮತ್ತು ಶುದ್ಧರು ವಿರಳ ಆಗುತ್ತಿದ್ದಾರೆ. ಅವರಿಂದಲೇ ಜಗತ್ತಿನ ಉದ್ಧಾರ. ಇವೆರಡು ಅವರ ಕಣ್ಣುಗಳು.

**- ಡಾ. ಶಿವಮೂರ್ತಿ ಮುರುಘಾಶರಣರು**

## ಹೊಲೆಗಂಡಲ್ಲದೆ ಪಿಂಡದ ನೆಲೆಗಾಶ್ರಯವಿಲ್ಲ : ಅಕ್ಕಮ್ಮ

**ಪ್ರೊ.ಎಸ್.ಜಿ. ಸಿದ್ಧರಾಮಯ್ಯ**

ಮುಟ್ಟು ಎನ್ನುವ ಪದಕ್ಕೆ ಇನ್ನೊಂದು ಅರ್ಥ ಹೊಲೆ. ಮುಟ್ಟು ನಿಂತಿತು, ಮುಟ್ಟಾದೆ ಎನ್ನುವ ಪದಗಳು ಹೆಣ್ಣಿನ ಮಾಸಿಕ ಋತುಸ್ರಾವದ ಕ್ರಿಯೆಯನ್ನು ಸೂಚಿಸುವ ಶಬ್ದಗಳು. ಹೆಣ್ಣು ಮುಟ್ಟಾದಾಗ ಅವಳನ್ನು ಯಾರೂ ಮುಟ್ಟುವಂತಿಲ್ಲ. ಅವಳು ಮೂರು ನೀರು ಆಗುವವರೆಗೂ ಮೂಲೆಯಲ್ಲಿ ಕುಳಿತು ಕಾಲಕಳೆಯಬೇಕು.

ಮುಟ್ಟಾದ ಹೆಣ್ಣು ಕೂರುವುದಕ್ಕೇ ಪ್ರತ್ಯೇಕ ಜಾಗವಿರುತ್ತಿತ್ತು. ಇದೆಲ್ಲ ಅಶೂದ್ ಜಗತ್ತಿನ ಆಚರಣೆ. ಆದರೆ ಕಾಲಾಂತರದಲ್ಲಿ ಈ ಬಗೆಯ ಆಚರಣೆಗಳ ಅನುಕರಣೆಗೆ ಶೂದ್ರ ಜಗತ್ತೂ ಒಳಗಾಯಿತು. ಇದನ್ನೇ ಸಂಸ್ಕೃತೀಕರಣ ಎಂದು ಎಂ.ಎನ್. ಶ್ರೀನಿವಾಸ್ ಕರೆದಿದ್ದಾರೆ. ಶೂದ್ರರು ತಮ್ಮದಲ್ಲದ್ದನ್ನು ಅನುಕರಿಸಿ ಆಚರಣೆಗೆ ಒಳಗಾಗುವುದನ್ನು 'ಅಶೂದ್ರೀಕರಣ'ವೆಂದು ಕರೆಯುವುದು ಸೂಕ್ತ.

ಮುಟ್ಟು ಎನ್ನುವುದು ನಿಷೇಧ ವಿಧಿಯಾಗಿ ಶೂದ್ರರಲ್ಲಿ ಎಂದೂ ಆಚರಣೆಯಲ್ಲಿರಲಿಲ್ಲ. ಹೆಣ್ಣಿನ ಈ ನಿಸರ್ಗಕ್ರಿಯೆ ಜೈವಿಕಶಕ್ತಿಯ ದೇಹಧರ್ಮಕ್ಕೆ ಸಂಬಂಧಿಸಿದ್ದು. ಮುಟ್ಟು ನಿಂತಲ್ಲದೆ ಜೀವಸೃಷ್ಟಿ ಸಾಧ್ಯವಿಲ್ಲ. ಇಲ್ಲಿ ಮುಟ್ಟಾಗುವುದು ಮುಟ್ಟುನಿಲ್ಲುವುದು ಹೆಣ್ಣು ಗಂಡಿನ ಸಂಭೋಗ ಸಂಬಂಧದ ದೇಹಧರ್ಮವನ್ನು ನಿರ್ದೇಶಿಸುವ ಕ್ರಿಯಾಪದಗಳಾಗಿ ಬಳಕೆಯಾಗಿವೆ. 'ಹೊಲೆಗಂಡಲ್ಲದೆ ಪಿಂಡದ ನೆಲೆಗಾಶ್ರಯವಿಲ್ಲ' ಮುಟ್ಟುವುದು ಮುಟ್ಟದಿರುವುದು ಗಂಡು ಹೆಣ್ಣಿಗೆ ಸಂಬಂಧಿಸಿದ ಸಂಭೋಗದ ಸಮಯಾಸಮಯಗಳ ವಿಧಿಸೂಚಕ ಶಬ್ದಗಳು. ದೇಹಧರ್ಮ ಹಾಗೂ ಸೃಷ್ಟಿಧರ್ಮವನ್ನು ಗೌರವಿಸಿ ನಡೆಯುವ ಕ್ರಿಯೆ. ಇದನ್ನು ಹೊಲಸಿನ ಭಾವದಲ್ಲಿ ಅಸ್ಪೃಶ್ಯತೆಗೆ ಒಳಗು ಮಾಡಿ ಆಚರಣಾ ವಿಧಿಯಾಗಿಸಿದ್ದು ಅಶೂದ್ರ ಜಗತ್ತು. ಹೀಗಾಗಿ ಅಸ್ಪೃಶ್ಯತೆಯ ಆಚರಣೆಗೆ ಭಾಗಶಃ ಹೆಣ್ಣೂ ಬಲಿಯಾದದ್ದು ಈ ನೆಲೆಯಲ್ಲಿಯೇ. ಬಹಿಷ್ಠೆ ಎಂಬ ಪದ ಪ್ರಯೋಗವೂ ಇದನ್ನೇ ಹೇಳುತ್ತಿದೆ. ಹೊಲೆಗಂಡ ಸ್ಥಿತಿಯಲ್ಲಿ ಹೆಣ್ಣನ್ನು ಬಹಿಷ್ಠೆಯಾಗಿ ಕಾಣುತ್ತಾ ನಡೆಸಿಕೊಂಡಿರುವುದು ಲಿಂಗತಾರತಮ್ಯ ನೀತಿಯ ನಡವಳಿಕೆಯಾಗಿದೆ. ಅಶೂದ್ರೀಕರಣಕ್ಕೆ ತೆತ್ತುಕೊಂಡ ಶೂದ್ರ ಸಮುದಾಯಗಳು ಈ ತಾರತಮ್ಯ ನೀತಿಯನ್ನು ತಮ್ಮ ಬದುಕಿನ ಒಳಗೆ ಬಿಟ್ಟುಕೊಂಡದ್ದು ವಿಪರ್ಯಾಸವೇ ಸರಿ. ಏಕೆಂದರೆ ಬುಡಕಟ್ಟು ಮೂಲದ ಸಮುದಾಯಗಳಲ್ಲಿ, ಪಶುಪಾಲಕ ಸಂಸ್ಕೃತಿಗಳಲ್ಲಿ ಮಾತೃಪ್ರಧಾನ ವ್ಯವಸ್ಥೆ ಇದ್ದದ್ದು ಚಾರಿತ್ರಿಕ ಸತ್ಯ. ದಕ್ಷಿಣ ಕನ್ನಡ ಭಾಗದಲ್ಲಿ ಈಗಲೂ ಮಾತೃಪ್ರಧಾನ ಕುಟುಂಬ ವ್ಯವಸ್ಥೆಯ ಹಲವು ಆಚರಣೆಗಳನ್ನು ನೋಡಬಹುದು. ಅಲ್ಲದೆ ಗೊಲ್ಲರು ಕುರುಬರು ಇಂಥ ಸಮುದಾಯಗಳ ಆದಿರೂಪದ ಕೆಲವು ಆಚರಣೆಗಳಲ್ಲಿ ಮಾತೃಪ್ರಧಾನತೆಯ ಪಳೆಯುಳಿಕೆಗಳನ್ನು ಈಗಲೂ ಗುರುತಿಸಬಹುದು. ಕನ್ಯಾಮಾತೆ, ಸೀರುಡಿಕೆ ಮದುವೆಯಂಥ ಮಾನವೀಯವೂ, ಪ್ರಗತಿಪರವೂ



ಆದ ಆಚರಣೆಗಳು ಸ್ತ್ರೀಪರ ನಿಲುವಿನ ಮಹತ್ವದ ಆಚರಣೆಗಳಾಗಿ ಇದ್ದುವು. ಆದರೆ ಇವೆಲ್ಲ 'ಕೆಟ್ಟವು' ಎಂಬ ದೃಷ್ಟಿ ಬೆಳೆದದ್ದು ಅಶೂದ್ರೀಕರಣದ ಮೋಹಕ್ಕೆ ಈ ಸಮುದಾಯಗಳು ಬಲಿಹೋದ ಕಾಲದಿಂದ ಎಂಬುದು ವಸ್ತುಸತ್ಯ.

**ಅಕ್ಕಮ್ಮನ ನಿಲುವು:**

ಶರಣ ಚಳವಳಿಯು ಸ್ತ್ರೀಸಮಾನತೆಯನ್ನು ಎತ್ತಿ ಹಿಡಿದ ಚಳವಳಿ. ಜಾತಿ ತಾರತಮ್ಯವನ್ನಷ್ಟೇ ಅಲ್ಲದೆ, ಲಿಂಗತಾರತಮ್ಯದ ವಿರುದ್ಧವಾಗಿಯೂ ಹೋರಾಡಿದ ನಡೆ ಅದರದು. ಬಹಳ ಜನ ವಚನಕಾರರಲ್ಲಿ ಸ್ತ್ರೀಪುರುಷರ ಭೇದವನ್ನು ಕುರಿತಂತೆ ಪ್ರತಿಕ್ರಿಯಾತ್ಮಕ ರಚನೆಗಳಿವೆ. ಅವುಗಳಲ್ಲಿ ಹೆಚ್ಚು ಪ್ರಸಿದ್ಧವಾದುದು ಹಿರಿಯ ವಚನಕಾರ ಜೇಡರ ದಾಸಿಮಯ್ಯನ ರಚನೆ.

**ಮೊಲೆ ಮೂಡಿ ಬಂದಡೆ ಹೆಣ್ಣೆಂಬರು**
**ಗಡ್ಡ ಮೀಸೆ ಬಂದಡೆ ಗಂಡೆಂಬರು**
**ನಡುವೆ ಸುಳಿವ ಆತ್ಮನು**
**ಹೆಣ್ಣೂ ಅಲ್ಲ ಗಂಡೂ ಅಲ್ಲ ಕಾಣಾ ರಾಮನಾಥ.**

ದೇಹ ಪ್ರಕೃತಿಯ ಭಿನ್ನತೆಯ ನೆಲೆಯಲ್ಲಿ ಗಂಡು ಹೆಣ್ಣಿನ ವ್ಯತ್ಯಾಸವನ್ನು ಗುರುತಿಸುತ್ತಾ ದೇಹದೊಳಗಿನ ಜೀವ-ಮನಸ್ಸು-ಪ್ರಾಣ-ಆತ್ಮ ಈ ಬಗೆಯಲ್ಲಿ ಕರೆಯುವ ಚೇತನಕ್ಕೆ ಯಾವುದೇ ಬಗೆಯ ಭಿನ್ನತೆ ಇಲ್ಲ ಎಂದು ಹೇಳುತ್ತಿದ್ದಾನೆ ದಾಸಿಮಯ್ಯ.

ಈ ವಚನ ಲಿಂಗತಾರತಮ್ಯದ ವಿರುದ್ಧವಾಗಿ ಒಂದು ಗಟ್ಟಿ ನಿಲುವಿನ ತಾತ್ವಿಕತೆಯನ್ನು ಪ್ರತಿಪಾದಿಸುತ್ತಿದೆ. ಈ ತಾತ್ವಿಕತೆ ನಿಸರ್ಗ ಧರ್ಮದಲ್ಲಿ ಜೀವಸೃಷ್ಟಿಗೆ ಅಗತ್ಯವಾದ ಪುರುಷ-ಪ್ರಕೃತಿ ತತ್ವವನ್ನು ಹೇಳುವುದೇ ಆಗಿದೆ.

ಪ್ರಕೃತಿ ಪುರುಷರ ಸಂಗದಲ್ಲಿ ಮಾತ್ರ ಸೃಷ್ಟಿ ಸಾಧ್ಯ: ಇದು ಜೀವಸೃಷ್ಟಿಗೆ ಕಾರಣವಾಗುವ ಜೈವಿಕತೆಯ ಗುಣಧರ್ಮ. ಭಿನ್ನತೆಯಲ್ಲಿ ಸಂಗಗೊಳ್ಳುವ ಅರ್ಥಾತ್ ಸಂಲಗ್ನಗೊಳ್ಳುವ ಈ ಬಗೆ ಜಂಗಮತ್ವಕ್ಕೆ ಪೂರಕವೂ, ಪ್ರೇರಕವೂ ಆದ ಒಳಗೊಳ್ಳುವ ತಾತ್ವಿಕತೆಯನ್ನು ಹೇಳುತ್ತಿದೆ. ಹೀಗೆ ಒಳಗೊಳ್ಳುವುದೆಂದರೆ ದ್ವಯ-ಅದ್ವಯವಾಗುವ, ಅದ್ವಯ-ದ್ವಯವಾಗುವ ಕ್ರಿಯೆ. ಇದು ನಿಂತ ಸ್ಥಾವರದ ಇರುವಿಕೆಯಲ್ಲ, ನಿರಂತರವಾದ ಜಂಗಮದ ಹರಿಯುವಿಕೆ.

ಆತ್ಮವಾದಿ ಅಂಶವನ್ನು ಒಪ್ಪಿಕೊಂಡ ಭಾವದ ಅಂದರೆ ಪುನರ್ಜನ್ಮ ಕರ್ಮ ಸಿದ್ಧಾಂತ ಇಂಥ ಅವಿಚಾರಿತ ಅಂಶಗಳನ್ನು ಒಪ್ಪಿಕೊಂಡ ಭಾವದ ಆಲೋಚನೆಯಲ್ಲ ಇದು. ಆತ್ಮದ ಸಂಬೋಧನೆ ಇದ್ದರೂ ಅದು ಕೇವಲ ಚೇತನ ಎಂಬ ಅರ್ಥದಲ್ಲಿ ಪ್ರತೀತಗೊಳ್ಳುವ ಸಂಬೋಧನೆ ಅಷ್ಟೆ. ಇದರ ಸ್ಪಷ್ಟ ಅರಿವಿಗೆ ವಚನಕಾರ್ತಿ ಅಕ್ಕಮ್ಮನ ವಚನವೊಂದನ್ನು ಗಮನಿಸಬಹುದು:

**ಎನ್ನ ಲಿಂಗವಂತೆಗೆ ಸೂತಕಮಾಸ ತಡೆದಲ್ಲಿ**
**ಗರ್ಭವೆಂಬುದು ತಲೆದೂರಿದಲ್ಲಿಯೇ ಆತ್ಮಚೇತನನೆನಿಸುವನ್ನಕ್ಕ**
**ಆಕೆಯ ಉದರದ ಮೇಲೆ ನಿಹಿತ ಲಿಂಗವಿರಬೇಕು.**
**ನವಮಾಸ ತುಂಬಿ ಆಕೆಯ ಗರ್ಭದಿಂದ**
**ಉಭಯಜಾತತ್ವವಾಗಲಾಗಿ**
**ಚೇತನ ಬೇರಾದಲ್ಲಿ ಗುರು ಕರಜಾತನ ಮಾಡಬೇಕು.**

**ಎನ್ನ ಸಮಗ್ರಾಹಕ ಶೀಲ ಸಂಪಾದಕರನಲ್ಲದೆ**

ಎನ್ನ ಕಣ್ಣಿನಲ್ಲಿ ನೋಡೆ ಜಿಹ್ವೆಯಲ್ಲಿ ನೆನೆಯೆ
ಮಿಕ್ಕಾದ ತಟ್ಟುವ ಮುಟ್ಟುವ ತಾಗುವ ಸೋಂಕುವ
ನಾನಾಗುಣಂಗಳಲ್ಲಿ ಶೋಧಿಸಿಯಲ್ಲದೆ ಬೆರೆಯೆ

ಕೊಂಬಲ್ಲಿ ಕೊಡುವಲ್ಲಿ
ಎನ್ನ ವ್ರತಾಚಾರವ ಅಂಗೀಕರಿಸಿದವರಿಗಲ್ಲದೆ ಹೋಗೆ
ಇದಕ್ಕೆ ದೃಷ್ಟವ ನೋಡಿಹೆನೆಂದಡೆ ತೋರುವೆ
ಶ್ರುತದಲ್ಲಿ ಕೇಳುವೆನೆಂದಡೆ ಹೇಳುವೆ
ಅನುಮಾನದಲ್ಲಿ ಅರಿದಿಹೆನೆಂದಡೆ
ಎನ್ನ ಆಚಾರದ ಆತ್ಮನ ಎನ್ನ ಕೈಯಲ್ಲಿ ಹಿಡಿದು
ನಿಮ್ಮ ಕೈಯಲ್ಲಿ ಕೊಡುವೆ
ಈ ಭಾಷೆಗೆ ತಪ್ಪೆನೆಂದು ಕಟ್ಟಿದೆ ತೊಡರುವ.

ಅಕ್ಕಮ್ಮ ಸೂಳೆ ಸಂಕವ್ವನಂತೆ ಕಾಯಕನಿರತ ಹೆಣ್ಣು. ಅವಳ ವಚನಗಳು ಈ ಅಂಶಗಳನ್ನು ಮನಗಾಣಿಸುತ್ತವೆ. ತನ್ನ ಕಾಯಕಕ್ಕೆ ಸಂಬಂಧಿಸಿದಂತೆ ಅವಳದೇ ಆದ ವ್ರತ, ನೇಮ, ನಿಯಮಗಳ ಕಟ್ಟಳೆ ಹಾಕಿಕೊಂಡಿದ್ದಾಳೆ. ಈ ಕಟ್ಟು ಕಟ್ಟಳೆಗಳು ಹೆಣ್ಣಿನ ಮಾನಸಿಕ ಸೂತಕಕ್ಕೆ ಸಂಬಂಧಿಸಿದ್ದು, ಗರ್ಭವೆಂಬುದು ತಲೆದೋರಿದ ಮೇಲೆ ಅಂಥ ಹೆಣ್ಣಿನ ಸಂಗ ಮಾಡುವಂತಿಲ್ಲ. ಏಕೆಂದರೆ ಪಿಂಡವೆಂಬುದು ಆತ್ಮಚೇತನವೆನಿಸುವನ್ನಕ್ಕ ಆ ಉದರ ನಿಹಿತಲಿಂಗದ ಗರ್ಭ. ನವಮಾಸ ತುಂಬಿ ಆಕೆಯ ಗರ್ಭದಿಂದ ಉಭಯ ಜಾತತ್ವವಾಗುವವರೆಗೆ ಅದು ಜಿವದೇವನ ನೆಲೆವಾಸ. ಇದು ಪಿಂಡದ ನೆಲೆಗಂಡ ಕಾಯವನ್ನು ಪವಿತ್ರತರ ಭಾವದಲ್ಲಿ ಕಾಣುವ ಗೌರವಿಸುವ ದೃಷ್ಟಿ. ಇಲ್ಲಿ ಉಭಯಜಾತ ಎಂಬುದು ತಾಯಿ-ಮಗು ಇಬ್ಬರಿಗೂ ಅದು ಹೊಸ ಹುಟ್ಟು ಎಂಬುದನ್ನು ಸೂಚಿಸುತ್ತಿದೆ. ಮಗುವಿಗೆ ಜನ್ಮಕೊಡುವ ತಾಯಿಗೆ ಪ್ರತಿಯೊಂದು ಹೆರಿಗೆಯೂ ಹೊಸಹುಟ್ಟಿನ ಪರೀಕ್ಷೆಯೇ. ಒಡಲೊಳಗಿನ ಚೇತನ ಮೂಲ ಚೇತನವನ್ನು ಬಿಟ್ಟು ಬೇರಾದಾಗ ಆ ಚೇತನವನ್ನು ಗುರುಕರಜಾತವಾಗಿಸಬೇಕು. ಅಂದರೆ ಗುರುವಿನ ಕರಸೋಂಕಿನಲ್ಲಿ ಹೊಸಹುಟ್ಟು ಪಡೆದವನನ್ನಾಗಿಸಬೇಕು. ಗುರುಕರಜಾತ ಎಂಬ ಆಚರಣೆಯೇ ಮುಟ್ಟಿನಿಂದ ಸ್ಪರ್ಶದಿಂದ ಪವಿತ್ರೀಕರಣಗೊಳ್ಳುವ ಪ್ರಕ್ರಿಯೆಯನ್ನು ಹೇಳುತ್ತಿದೆ. ಇದು ಅಕ್ಕಮ್ಮ ತನ್ನ ಕಾಯ ಸಂಬಂಧದ ಕಾಯಕದಲ್ಲಿ ಮುಟ್ಟುವಿಕೆಗೆ ಕೂಡುವಿಕೆಗೆ ಹಾಕಿದ ಶೀಲವಂತ ಆಚಾರ ವಿಧಿಗಳು. ಇದು ದೇಹಧರ್ಮವನ್ನು ವೈಜ್ಞಾನಿಕ ನೆಲೆಯಲ್ಲಿ ಅರಿತಂತೆ ಹಾಕಿಕೊಂಡ ಅರಿವಿನ ಆಚಾರವೇ ಹೊರತು ಮೈಲಿಗೆ ಎಂಬ ಭಾವದಲ್ಲಿ ನಿಷೇಧಾತ್ಮಕವಾಗಿ ಹೇರಿಕೊಂಡ ಅಸ್ಪೃಶ್ಯತೆಯ ಕಟ್ಟುಪಾಡು ಅಲ್ಲ. ಅದೂ ಅಲ್ಲದೆ ತನ್ನ ವ್ರತಾಚಾರಕ್ಕೆ ಬದ್ಧನಲ್ಲದ ಯಾವ ಗಂಡನನ್ನೂ ತಾನು ಕೂಡುವುದಿಲ್ಲ ಎಂದು ಹೇಳುತ್ತಿದ್ದಾಳೆ.

ಇಲ್ಲಿಯೂ ಗಮನಿಸಬೇಕಾದ ಅಂಶವೊಂದಿದೆ. ಗಂಡಿನ ಸಂಬಂಧದ ಮಾಡುವುದೆಂದರೆ ಅವಳಿಗೆ ಹಣವಿದ್ದವನನ್ನು ಎಂಥವನನ್ನಾದರೂ ಸ್ವೀಕರಿಸುವುದು ಎಂಬ ಭಾವದ್ದಲ್ಲ. ಅವಳು ವಿಧಿಸುವ ವ್ರತನೇಮಗಳಿಗೆ ಅವನು ಸಮ್ಮತಿಸಬೇಕು. ಅವನನ್ನು 'ಸಮಗ್ರಾಹಕ ಶೀಲಸಂಪಾದಕ' ಎಂದು ಕರೆಯುತ್ತಿದ್ದಾಳೆ. ದೇಹ ಸುಖವೆಂಬುದು ಪಡೆಯುವ ಕೊಡುವ ಮಾನಸಿಕ ಸಮ ಹಾಗೂ ಸಹಭಾಗಿತ್ವದಲ್ಲಿದೆ. ಇದನ್ನು ಸಮಗ್ರಾಹಕ ಶಬ್ದ ಸೂಚಿಸುತ್ತಿದೆ. ಇದು ಶೀಲಸಂಪಾದಕ



ಗುಣಿಯಾದವನನ್ನು ಕೂಡಿದಾಗ ಮಾತ್ರ ತನ್ನಲ್ಲಿ ಆಗುವ ದೇಹ ವ್ಯಾಪಾರ ಧರ್ಮ ಎಂದು ಹೇಳುತ್ತಿದ್ದಾಳೆ ಅಕ್ಕಮ್ಮ. ಈ ನಡವಳಿಗೆ ಅಶೂದ್ರೀಕರಣದ ಮುಟ್ಟಾದ ಹೆಣ್ಣನ್ನು ಮುಟ್ಟಬಾರದು ಎಂಬ ಮೈಲಿಗೆಯ ಪ್ರತ್ಯೇಕತೆಯ ಅಸ್ಪೃಶ್ಯತೆಯ ಧೋರಣೆಯದ್ದಲ್ಲ; ಅದಕ್ಕಿಂತ ಭಿನ್ನವಾಗಿ ಆ ಸಮಯದಲ್ಲಿ ಆ ಹೆಣ್ಣನ್ನು ಗಂಡು ಕೂಡಬಾರದು ಎಂಬ ಪ್ರಕೃತಿಧರ್ಮಾನುಸಾರಿಯಾದ ನಡವಳಿಕೆ. ಪಿಂಡದ ನೆಲೆಗಾಶ್ರಯವಾದ ಗರ್ಭವನ್ನು ದೇವವಾಸವೆಂದು ಪವಿತ್ರ ಭಾವದಲ್ಲಿ ಗೌರವಿಸಿದ ಈ ನಡವಳಿಕೆ ಮುಟ್ಟಬಾರದ ಮೈಲಿಗೆಯಲ್ಲ; ಕಾಮಸಂಬಂಧದ ಮಾಡಬಾರದ ಪ್ರಕೃತಿ ಸೂಕ್ಷ್ಮ ಎಚ್ಚರ.

ದೇವಾಲಯದಲ್ಲಿ ಸತ್ತಡೆ ಸಂಪ್ರೋಕ್ಷಣವಲ್ಲದೆ
ದೇವರು ಸತ್ತಲ್ಲಿ ಉಂಟೆ ಸಂಪ್ರೋಕ್ಷಣೆ?
ಅಂಗದಲ್ಲಿ ಮರವೆಗೆ ಹಿಂಗುವೆ ಠಾವಲ್ಲದೆ
ಮನವರಿದು ತಾಕು ಸೋಂಕಿಗೆ ಹೆದರದೆ ಕೂಡಿದ
ದುರ್ಗುಣಕ್ಕುಂಟೆ ಪ್ರಾಯಶ್ಚಿತ್ತ?
ಇಂತಿವ ಕಂಡಲ್ಲಿ ಗುರುವಾದಡೂ ಬಿಡಬೇಕು
ಲಿಂಗವಾದಡೂ ಬಿಡಬೇಕು ಜಂಗಮವಾದಡೂ ಬಿಡಬೇಕು
ಆಚಾರವೇ ಪ್ರಾಣವಾದ ರಾಮೇಶ್ವರ ಲಿಂಗವಾದಡೂ ಬಿಡಬೇಕು.

ಇದು ಅಕ್ಕಮ್ಮನ ನಿಷ್ಠುರ ನಡೆ. ಗರ್ಭ ನಿಂತ ದೇಹದಲ್ಲಿರುವ 'ಜೀವದೇವನ' ಸಂರಕ್ಷಣೆಯ ಹೊಣೆಯರಿತ ನಿರ್ಧಾರ. ಕಾಯಕದಲ್ಲಿ ನಿರತನಾದ ಮೇಲೆ ಶರಣನಾದವನು ಗುರುಲಿಂಗ ಜಂಗಮವಾದಡೂ ಮರೆಯಬೇಕು ಎಂಬುದು ಶರಣತತ್ವ.

ಇಲ್ಲಿ ಕಾಯಧರ್ಮ ನಿಯುಕ್ತವಾ ಮೇಲೆ ಕಾಯಕ ಕೂಡದು, ಕಾಯಕ ಬಯಸಿ ಬಂದವನು ಗುರುಲಿಂಗ ಜಂಗಮವಾದರೂ ನಿರಾಕರಿಸಬೇಕು ಎಂಬ ನಿಲುವಿದೆ. ಇದು ಕಾಯಕದ ಸ್ವರೂಪ ಭಿನ್ನತೆಯಲ್ಲಿ ಹುಟ್ಟಿಕೊಂಡ ನಿರಾಕರಣೆಯ ನಿಲುವು. ದೇವಾಲಯದೊಳಗೆ ಸಾವಾದರೆ ಸೂತಕ ಕಳೆದುಕೊಳ್ಳಬಹುದು. ದೇವರಿಗೇ ಸಾವಾದರೆ ಸೂತಕಕ್ಕೆ ಅರ್ಥವುಂಟೇ!

ದೇಹವನ್ನು ದೇವಾಲಯವೆಂದು ಭಾವಿಸಿದ ಶರಣತತ್ವದಲ್ಲಿ ದೇಹಾಲಯದ ದೈವಿಕತೆಯನ್ನು ಅಕ್ಕಮ್ಮ ಭಾವಿಸಿದ ಪರಿ ಅನನ್ಯವಾದ ಅನುಭಾವಿಕತೆಯ ತೇಜಸ್ಸಿನಿಂದ ಕೂಡಿದೆ. ಅಕ್ಕಮ್ಮನ ವಚನಗಳನ್ನು ಓದುತ್ತಿದ್ದರೆ ಅವು ಅವಳ ಜೀವನ ವೃತ್ತಾಂತದ ನಿವೇದನೆಯಂತೆ ಕೇಳಿಸುತ್ತವೆ.

ಗುರುವಾಗಿ ಬಂದು ತನುವ ಕೊರೆದಡೂ ಕೇಳೆ
ಲಿಂಗವಾಗಿ ಬಂದು ಮನದಲ್ಲಿ ಕುಳ್ಳಿರ್ದು
ನಿಜಾಂಗವ ತೋರಿದಡೂ ಕೇಳೆ
ನಿಜಾಂಗವಾಗಿ ಬಂದು ಬಯಲ ಬೆಳಗಿನಲ್ಲಿ
ಒಳಗಾದೆನೆಂದಡೂ ಒಲ್ಲೆ
ಅದೆಂತೆಂದಡೆ
ಕುಟಿಲದಲ್ಲಿ ಬಂದು ವ್ರತವ ಕೆಡಿಸಿಹೆನೆಂದಡೆ
ಕುಟಿಲದ ದೇವರುಂಟೆ?
ವ್ರತ ಮೊದಲು ಘಟ ಕಡೆಯಾಗಿ ಘಟಿಸುವೆನಲ್ಲದೆ

**ಮೂರು ಕಿಸುಕುಳಕಾಗಿ ಘಟವ ಹೊರೆದಡೆ**
**ಆಚಾರವೇ ಪ್ರಾಣವಾದ ರಾಮೇಶ್ವರಲಿಂಗಕ್ಕೆ ದೂರ.**

ವ್ರತಾಚಾರ ನಿಷ್ಠಳಾದ ಅಕ್ಕಮ್ಮನ ಈ ನಿಲುವಿನಲ್ಲಿ ಮಾಡುವ ಕಾಯಕದ ಮಹತ್ವ ಏನೆಂಬ ಅರಿವು ಪ್ರತೀತಗೊಳ್ಳುತ್ತಿದೆ. ಅವಳಿಗೆ ದೇವದಾಸಿ ವೃತ್ತಿ ದೇಹವ್ಯಾಪಾರದ ವ್ಯವಹಾರವಲ್ಲ; ದೇಹ ಧರ್ಮವರಿತ ಶುದ್ಧಭಾವದ ಕಾಯಕ. ಈ ವೃತ್ತಿ ಕೆಟ್ಟದ್ದು ಎಂಬ ಕೀಳರಿಮೆಯ ಪಶ್ಚಾತ್ತಾಪದ ಕಾಡಿಕೆ ಇವಳಿಗಿಲ್ಲ.

ಬದಲಾಗಿ ಇದು ಕಾಯಕ, ಆಚಾರ ನಿಷ್ಠೆ ವ್ರತನಿಷ್ಠ ಕಾಯಕ ಎಂಬ ಸ್ವಾನುಭೂತಿಯ ನಿಲುವಿದೆ, ಸ್ವಾಭಿಮಾನದ ನೈತಿಕ ಮನೋಬಲವಿದೆ. ಇವಳ ಪ್ರಕಾರ ವ್ರತವೆಂದರೆ ಮನವಿಕಾರಿಸುವುದಕ್ಕೆ ಕಟ್ಟಿದ ಗೊತ್ತು. ಬೀಗಿ ಬೆಳೆದ ಹೊಲಕ್ಕೆ ಬೇಲಿಯ ಕಟ್ಟಿದಡೆ ಚೇಗೆಯುಂಟೆ?

ಮನಬಂದಂತೆ ಆಡದೆ ತನುಬಂದಂತೆ ಕೂಡದೆ ವ್ರತದಂಗಕ್ಕೆ ಸಂಗವಾಗಿ ನಿಲ್ಲುವುದೆ ನಿಜವಾದ ನಿಲುವು.

ಹಾಗೆಯೇ ಇವಳು ವೇಷಧಾರಿ ಡಂಭಕರನ್ನು ನಿರ್ದಾಕ್ಷಿಣ್ಯವಾಗಿ ತಿರಸ್ಕರಿಸುವ ವೈಚಾರಿಕ ನೈಷ್ಠುರ್ಯವನ್ನು ಮೆರೆದಿದ್ದಾಳೆ. ದೇವರು ಭಕ್ತರನ್ನು ಪರೀಕ್ಷಿಸಲು ಹಲವು ವೇಷಗಳಲ್ಲಿ ಬರುತ್ತಾನೆ ಎಂಬ ಭಾವುಕ ಭ್ರಮಾಧೀನ ಕಲ್ಪನೆಯನ್ನೇ ಒಡೆದು 'ಕುಟಿಲದ ದೇವರುಂಟೆ?' ಎಂದು ಪ್ರಶ್ನಿಸುವ ಇವಳ ನಿಲುವು ವಸ್ತುನಿಷ್ಠ ನೆಲೆಯಲ್ಲಿ ಮನುಷ್ಯನ ನಡವಳಿಕೆಯನ್ನು ವಿಮರ್ಶಿಸುವ ಗತಿಶೀಲಗುಣದಿಂದ ಕೂಡಿರುವುದು. ಭಾವುಕತೆಗಿಂತ ವಿಚಾರನಿಷ್ಠ ನೆಲೆಯ ಇವಳ ಚಿಂತನಾಶೀಲದೃಷ್ಟಿ ಗಮನಿಸಬೇಕಾದುದು. ಭ್ರೂಣಹತ್ಯೆ, ಹೆಣ್ಣು ಶಿಶು ಹತ್ಯೆ ಎಂಬುದು ದೈನಂದಿನ ರೋಗವಾಗಿರುವ ಇಂದಿನ ಸಂದರ್ಭದಲ್ಲಿ ಅಕ್ಕಮ್ಮನ ಈ ವೈಜ್ಞಾನಿಕ ಮನೋಧರ್ಮದ ವಿಚಾರದೃಷ್ಟಿ ಮಾನವೀಯವೂ ಮನನೀಯವೂ ಆದುದಾಗಿದೆ. ಇದು ಅವಳ ತನುವಿಚಾರ ಕ್ರೀ ವಿಚಾರ ಮಾತೃಭಾವದ ಲೋಕ ವಿಚಾರ.

*ನಂ.೬, 'ಅಸೀಮ', ಕಾರ್ಪೋರೇಶನ್ ಬ್ಯಾಂಕ್ ಹತ್ತಿರ, ಜಯರಾಮ ಲೇಔಟ್, ಜಕ್ಕೂರು*
*ಬೆಂಗಳೂರು – ೫೬೦ ೦೬೪, ಮೊ: ೯೪೪೮೯ ೪೯೭೩೭*

ಹೊರಗನೆ ಕೊಯ್ದು ಹೊರಗನೆ ಪೂಜಿಸಿದವರ ಕಂಡು,
ನಾಚಿದೆ ನಾಚಿದೆನಯ್ಯಾ,
ಒಳಗೆ, ಒಂದು ಅನಿಮಿಷಲಿಂಗವ ಕಂಡು,
ಎನ್ನ ಮನೋಪುಷ್ಪದಲ್ಲಿ ಪೂಜಿಸಿದಡೆ
ನಾಚಿಕೆ ಮಾಡು ನಿಸ್ಸಂದೇಹಿಯಾದೆನು ಗುಹೇಶ್ವರಾ.



## ಕ್ಷೇತ್ರ, ವಾರ್ತೆಗಳು



ಇಂಡಿ: "ವಚನ ದಿನ" ಕಾರ್ಯಕ್ರಮ ಹಾಗೂ ಲಿಂ. ಸಂಗಮ್ಮ ಬಸೆಟ್ಟಪ್ಪ ಸುರಪುರ ದತ್ತಿ ಮತ್ತು ಲಿಂ. ಸಂಗಮ್ಮ ಸಾತಗೌಡ ಬಗಲಿ ಸಾ. ಇಂಡಿ ದತ್ತಿ ಉಪನ್ಯಾಸ ಕಾರ್ಯಕ್ರಮ. ದಿನಾಂಕ:೨೯.೦೮.೨೦೨೦ ಸಾನಿಧ್ಯ: ಡಾ. ಸ್ವರೂಪಾನಂದ ಸ್ವಾಮೀಜಿ, ಅಧ್ಯಕ್ಷತೆ: ಎಂ.ಪಿ. ಭೈರಜಿ, ಉಪನ್ಯಾಸಕರು: ದಾನಪ್ಪ ಬಗಲಿ, ದತ್ತಿ ದಾನಿಗಳು: ಐ.ಬಿ. ಸುರಪುರ, ವೇದಿಕೆಯಲ್ಲಿ: ಆರ್.ವಿ. ಪಾಟೀಲ, ಡಾ. ದೇವೇಂದ್ರ ಬರಡೋಲ, ಎಸ್.ಎಸ್. ಸ್ವಾಮಿ, ಬಿ.ಎಸ್. ಪಾಟೀಲ



ಹೆಬ್ರಿ ತಾಲೂಕು: "ವಚನ ದಿನ" ಕಾರ್ಯಕ್ರಮ ಹಾಗೂ ಸುತ್ತೂರು ಜಗದ್ಗುರು ಶ್ರೀ ಸಿದ್ಧನಂಜ ದೇಶಿಕೇಂದ್ರರ ದತ್ತಿ ಉಪನ್ಯಾಸ ಕಾರ್ಯಕ್ರಮ, ದಿನಾಂಕ:೨೯.೦೮.೨೦೨೦ ವೇದಿಕೆಯಲ್ಲಿ: ಶ್ರೀ ದಿವಾಕರ ಮರಕಲ, ಮುಖ್ಯೋಪಾಧ್ಯಾಯರು, ಶಿಕ್ಷಕರು




ತಿಕೋಟಾ: "ವಚನ ದಿನ" ಕಾರ್ಯಕ್ರಮ ಹಾಗೂ ಮರಿಲಂಗವ್ವ ಮಲೇಶಪ್ಪ ಗಂಜ್ಯಾಳ ದತ್ತಿ ಉಪನ್ಯಾಸ ಕಾರ್ಯಕ್ರಮ, ದಿನಾಂಕ:೨೯.೦೮.೨೦೨೦ ಸಾನ್ನಿಧ್ಯ ಪ.ಪೂ.ಚನ್ನಮಲ್ಲಕಾಜುನ ಸ್ವಾಮೀಜಿ. ವೇದಿಕೆಯಲ್ಲಿ: ಬಸಯ್ಯ ವಿಭೂತಿ, ವಾಮನರಾವ ಸೊಂಡೂರ, ಡಾ. ಜಿ.ಎಸ.ಭೊಸಗೂಂಡ, ಚಂದ್ರಶೇಖರಯ್ಯ ಹಿರೇಮಠ, ಅಶೋಕ ಮ.ಗಂಜ್ಯಾಳ



ಸಾಗರ: "ವಚನ ದಿನ" ಕಾರ್ಯಕ್ರಮ ಹಾಗೂ ಲಿಂ. ಸಿದ್ದಪ್ಪ ಮಹಾದೇವಪ್ಪ ಕೊಡೇರ್ ದತ್ತಿ ಮತ್ತು ಲಿಂ. ಆರ್. ಜಯಮ್ಮ ಶಿವಮಾದೇಗೌಡ ದತ್ತಿ ಉಪನ್ಯಾಸ ಕಾರ್ಯಕ್ರಮ, ದಿನಾಂಕ:೨೯.೦೮.೨೦೨೦ ವೇದಿಕೆಯಲ್ಲಿ: ಶಶಿಧರ ಬಿ.ಸಿ., ಪ್ರೊ. ಸಫ್ರಾಜ್ ಚಂದ್ರಗುತ್ತಿ, ದಿನೇಶ್ ಬರದವಳ್ಳಿ, ಹಿತಕರ ಜೈನ್, ಯು.ಸಿ. ಸಿದ್ಧಲಿಂಗೇಶ್ವರ, ಕವಿತಾ ಜಯಣ್ಣ, ಭರತ್ ಕಾರೆಕೊಪ್ಪ



ಅರಕಲಗೂಡು: "ವಚನದಿನ" ಕಾರ್ಯಕ್ರಮ, ದಿನಾಂಕ: ೨೯.೦೮.೨೦೨೦ ವೇದಿಕೆಯಲ್ಲಿ: ನಂಜುಂಡಸ್ವಾಮಿ, ಡಾ. ಎ.ಎನ್. ಕುಮಾರಸ್ವಾಮಿ, ಕೆ.ಎಂ. ಪ್ರಕಾಶ್, ಕುಮಾರಿ ಪ್ರಸಾದ್, ಡಿ.ಪಿ. ಶಿವಕುಮಾರ್, ಲೋಕೇಶ್



ಜಮಖಂಡಿ: "ವಚನ ದಿನ" ಮತ್ತು ಲಿಂ. ಪಿ.ಎಮ್. ಬಾಂಗಿ ಮತ್ತು ಲಿಂ.ಎ.ಬಿ.ತೇಲಿ ಇವರ ಸ್ಮರಣಾರ್ಥ ದತ್ತಿ ಉಪನ್ಯಾಸ. ದಿನಾಂಕ: ೨೯.೮.೨೦೨೦. ವೇದಿಕೆಯಲ್ಲಿ: ಶೋಭಾ ಬಡಚಿ, ಮಲ್ಲಿಕಾರ್ಜುನ ಇಂಡಿ, ಪ್ರಾ.ಎಮ್.ಕೆ. ಬಡಚಿ, ಭ.ನಿಂ. ಅಸ್ಕಿ, ಎನ್.ಎಸ್. ದೇವರವರ, ಡಾ. ಶಾರದಾ ಮುಳ್ಳೂರ, ಎಮ್.ಎಸ್. ನ್ಯಾಮಗೌಡ, ಶಂಕರ ಲಮಾಣಿ.






ಕದಳಿ ವೇದಿಕೆ, ಬೆಂಗಳೂರು: "ವಚನ ದಿನ" ಕಾರ್ಯಕ್ರಮ ಹಾಗೂ ಲಿಂ. ದಿಬ್ಬೂರು ಶಿವಕುಮಾರ್ ಸ್ಮರಣೆ ದತ್ತಿ ಹಾಗೂ ಕೆ.ಪಿ. ಸಿದ್ಧಲಿಂಗಪ್ಪ ನಾಗರತ್ನಮ್ಮ ದತ್ತಿ ಉಪನ್ಯಾಸ ಕಾರ್ಯಕ್ರಮ, ದಿನಾಂಕ:೨೯.೦೮.೨೦೨೦ ವೇದಿಕೆಯಲ್ಲಿ: ರೇಣುಕಾ ಶಂಕರ್ ಪ್ರೇಮಾ ಸೋಮಸುಂದರ್, ಚಿತ್ಕಲಾ ರವಿ, ದಿಬ್ಬೂರು ವಿ. ಗಿರೀಶ್, ಶಾಂತಾಮಣಿ ಮೃತ್ಯುಂಜಯ



ಹಾನಗಲ್ಲ: "ವಚನ ದಿನ" ಕಾರ್ಯಕ್ರಮ ದಿನಾಂಕ: ೨೯.೦೮.೨೦೨೦
ವೇದಿಕೆಯಲ್ಲಿ: ಪ್ರೊ. ಮಾರುತಿ ಶಿಡ್ಲಾಪೂರ, ರವಿಬಾಬು ಪೂಜಾರ, ನಿರಂಜನ ಗುಡಿ, ವೀಣಾ ಗುಡಿ, ರೇಖಾ ಶೆಟ್ಟರ್, ಅಕ್ಕಮ್ಮ ಕುಂಬಾರಿ, ವೀಣಾ ಬ್ಯಾತನಾಳ, ಸಿ. ಮಂಜುನಾಥ, ಎಸ್. ವಿ. ಹೊಸಮನಿ



ಕೆ.ಆರ್.ನಗರ: "ವಚನ ದಿನ" ಕಾರ್ಯಕ್ರಮ ಮತ್ತು ಪ್ರೊ. ಹೆಚ್.ಪಿ. ಮಲ್ಲೇದೇವರು ದತ್ತಿ ಮತ್ತು ಸಿ.ವಿ.ಗುಡಿ ಪಟೇಲ್ ಶಿವಪ್ಪ ಮತ್ತು ಪುಟ್ಟಕ್ಕಯ್ಯಮ್ಮ ದತ್ತಿ ಉಪನ್ಯಾಸ ಕಾರ್ಯಕ್ರಮ, ದಿನಾಂಕ: ೨೯.೦೮.೨೦೨೦
ವೇದಿಕೆಯಲ್ಲಿ: ಸಿ.ಪಿ. ರಮೇಶ್ ಕುಮಾರ್, ರಾಜು ಪಿ.ಕೆ. ರಾಜಶೇಖರ್, ಸಣ್ಣಲಿಂಗಪ್ಪ, ಕೆ.ಸಿ. ಶಿವಕುಮಾರ್



ಯಾದಗಿರಿ: "ವಚನ ದಿನ" ಕಾರ್ಯಕ್ರಮ, ದಿನಾಂಕ: ೨೯.೦೮.೨೦೨೦ ಸಾನ್ನಿಧ್ಯ: ಶ್ರೀ ಶಾಂತವೀರ ಗುರುಮುರಘ ರಾಜೇಂದ್ರ ಮಹಾಸ್ವಾಮಿಗಳು, ವೇದಿಕೆಯಲ್ಲಿ: ಸಿದ್ದಪ್ಪ ಹೊಟ್ಟಿ, ವೆಂಕಟರಾವ್ ಕುಲಕರ್ಣಿ, ಡಾ. ಗಾಳೆಪ್ಪ ಪೂಜಾರಿ, ಶ್ರೀಶೈಲ ಪೂಜಾರಿ, ಆರ್. ಮಹಾದೇವಪ್ಪ ಗೌಡ, ಅಬ್ಬೆತುಮಕೂರ, ಬಸವರಾಜ ಮೋಟ್ನಳ್ಳಿ



ಮುದ್ದೇಬಿಹಾಳ: "ವಚನ ದಿನ" ಕಾರ್ಯಕ್ರಮ, ದಿನಾಂಕ: ೨೯.೦೮.೨೦೨೦
ವೇದಿಕೆಯಲ್ಲಿ : ಎಮ್.ಬಿ.ಪಾಟೀಲ, ಪ್ರೊ.ಎಸ್.ಎಸ್.ಹೂಗಾರ, ಎನ್.ಬಿ.ಹೊಸಮನಿ, ಬಸವರಾಜ ನಾಲತವಾಡ, ರುದ್ರೇಶ ಕಿತ್ತೂರ, ಪ್ರೊ.ವ್ಹಿ.ಎಸ್.ಲಮಾಣಿ, ರಾಜು ಹೊಸಮನಿ, ಶೈಲಜಾ ಗೊಂಗಡಿ, ಸವಿತಾ ಒಡೆಯರ.



ತುಮಕೂರು ಜಿಲ್ಲಾ ಕದಳಿ ಮಹಿಳಾ ವೇದಿಕೆ: "ವಚನ ದಿನ" ಕಾರ್ಯಕ್ರಮ ಲಿಂ.ಸಾವಂದಮ್ಮ ಲಿಂ.ಪುಟ್ಟಬಸವಯ್ಯ ಸಂಸ್ಮರಣಾ ದತ್ತಿ ಉಪನ್ಯಾಸ ಕಾರ್ಯಕ್ರಮ, ದಿನಾಂಕ: ೨೯.೦೮.೨೦೨೦
ವೇದಿಕೆಯಲ್ಲಿ: ಎಂ.ಜಿ. ಸಿದ್ದರಾಮಯ್ಯ, ನಾಗರತ್ನ ಚಂದ್ರಪ್ಪ, ಶೈಲಜ, ಸುಮಾ ಪ್ರಸನ್ನ, ಗಿರಿಜಾವಿರುಪಾಕ್ಷ, ಜ್ಯೋತಿ ಆನಂದ, ಜಯಂತಿ ಚಿತ್ತರಂಜನ್, ರಾಚಮ್ಮ, ರಾಗಿಣಿ, ಶಿವಲಿಂಗಮ್ಮ





ಕೊರಟಗೆರೆ: "ವಚನ ದಿನ" ಹಾಗೂ ಶ್ರೀ ಹೆಚ್.ಎಂ. ಮರುಳಾರಾಧ್ಯ ದತ್ತಿ ಉಪನ್ಯಾಸ ಕಾರ್ಯಕ್ರಮ, ದಿನಾಂಕ:೨೯.೦೮.೨೦೨೦ ವೇದಿಕೆಯಲ್ಲಿ: ಪರ್ವತಯ್ಯ, ಪದ್ಮ ರಮೇಶ್, ಡಿ.ಎಂ. ರಾಘವೇಂದ್ರ, ಶಿವಕುಮಾರ್, ಮಲ್ಲಿಕಾರ್ಜುನ್, ದಯಾನಂದ ಸ್ವಾಮಿ, ರುದ್ರಮೂರ್ತಿ ಎಲೆ ರಾಂಪುರ, ಲಕ್ಷ್ಮೀಶ್ರೀ




ಪಾವಗಡ: "ವಚನ ದಿನ" ಹಾಗೂ ಶ್ರೀಮತಿ ಬಸಮ್ಮ ವೈದ್ಯ ತಿಪ್ಪೇರುದ್ರಯ್ಯ ದತ್ತಿ ಉಪನ್ಯಾಸ ಕಾರ್ಯಕ್ರಮ, ದಿನಾಂಖ: ೨೯.೦೮.೨೦೨೦, ವೇದಿಕೆಯಲ್ಲಿ: ಅಂತರಗಂಗೆ ಶಂಕರಪ್ಪ, ಚಲುವರಾಜನ್, ಸಣ್ಣನಾಗಪ್ಪ, ಡಾ.ಕೆ.ಎಂ. ಪ್ರಭಾಕರ್, ಚೆನ್ನಬಸವಣ್ಣ, ಬಸವಲಿಂಗಪ್ಪ, ಮಾರಪ್ಪ



ಹುಲ್ಸೂರ್: "ವಚನ ದಿನ" ಕಾರ್ಯಕ್ರಮ ಹಾಗೂ ಲಿಂ. ಗೌರಮ್ಮ ವೀರಶೆಟ್ಟಪ್ಪ ಕಾಮಣ್ಣ ದತ್ತಿ ಉಪನ್ಯಾಸ ಕಾರ್ಯಕ್ರಮ, ದಿನಾಂಕ:೨೯.೦೮.೨೦೨೦ ವೇದಿಕೆಯಲ್ಲಿ: ಪೂಜ್ಯ ಶ್ರೀ ಶಿವಾನಂದ ಮಹಾಸ್ವಾಮಿಗಳು, ಮಂಗಳಾ ದೊಣಗಾಂವಕರ್, ಡಾ. ಭೀಮಾಶಂಕರ್ ಬಿರಾದಾರ್, ಮಲ್ಲಪ್ಪ ಧಬಾಲೆ, ಶ್ರೀದೇವೆ ನಿಡೋದೆ




ಹಗರಿಬೊಮ್ಮನಹಳ್ಳಿ: "ವಚನ ದಿನ" ಕಾರ್ಯಕ್ರಮ ಹಾಗೂ ಶ್ರೀಮತಿ ಶ್ರೀ ಚಿಗಟೇರಿ ಹೆಚ್. ಗೌರಮ್ಮ ನಾಗೇಂದ್ರಪ್ಪ ದತ್ತಿ ಉಪನ್ಯಾಸ ಕಾರ್ಯಕ್ರಮ, ದಿನಾಂಕ: ೨೯.೦೮.೨೦೨೦ ವೇದಿಕೆಯಲ್ಲಿ: ಬೆಟ್ಟಪ್ಪ, ಸವಿತಾ, ಸಿ. ಗುರುರಾಜಪ್ಪ




ಬಳ್ಳಾರಿ: "ವಚನ ದಿನ" ಕಾರ್ಯಕ್ರಮ ಹಾಗೂ ಗುರುಹಿರಿಯರ ದತ್ತಿ ಉಪನ್ಯಾಸ ಕಾರ್ಯಕ್ರಮ, ದಿನಾಂಕ: ೨೯.೦೮.೨೦೨೦
ವೇದಿಕೆಯಲ್ಲಿ : ಸುಮಂಗಲಮ್ಮ, ಡಾ. ಮಲ್ಲಿಕಾರ್ಜುನಗೌಡ, ಎಸ್.ಪಿ. ಹೊಂಬಳ, ಚಾಂದ್ ಬಾಷಾ, ಕೆ.ಬಿ. ಶಾಂತ ಸಿದ್ಧಲಿಂಗಪ್ಪ




ಪಿರಿಯಾಪಟ್ಟಣ: "ವಚನ ದಿನ" ಕಾರ್ಯಕ್ರಮ ಹಾಗೂ ಜಗದ್ಗುರು ಶ್ರೀ ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳ ದತ್ತಿ ಮತ್ತು ಶರಣ ಕೆ.ಎಂ. ಶಿವಶಂಕರ್ ದತ್ತಿ ಉಪನ್ಯಾಸ ಕಾರ್ಯಕ್ರಮ, ದಿನಾಂಕ: ೨೯.೦೮.೨೦೨೦
ವೇದಿಕೆಯಲ್ಲಿ: ಕೆ.ಪಿ. ಚಂದ್ರಶೇಖರಯ್ಯ, ಕೆ.ಎಸ್. ಮಹದೇವಪ್ಪ, ನಂಜುಂಡಸ್ವಾಮಿ, ಪ್ರದೀಪ್, ಪಿ.ವಿ. ಬಸವರಾಜಪ್ಪ, ಎಂ. ಮಲ್ಲೇಶ್, ನಾಗಶೆಟ್ಟಿ, ಜಗದೀಶ್ ಗೊರಳ್ಳಿ, ಶಿವಯೋಗ.

Magazine Registration No. RNI 68294/97
"REGISTERED" Postal Registration No. RNP/KA/BGS-167/2018-2020
Licensed to post without Pre Payment, License No. WPP no:- PMG/BG-119/2018-2020
Posted at Registered News Paper Mailing Center, Bangalore P.S.O. Mysore Road-560 026 on 5th of every Month
MAHAAMANE Monthly Magazine    Total Pages 68 (Include Cover Pages)    Date of Publication 1 October 2020



Published by: Go.Ru. Channabasappa,
Akhila Bharatha Sharana Sahitya Parishat (Regd.)
JSS Circle, 1st Main, 8th Block, Jayanagar, Bengaluru - 560 070
Printed at : Sathyasri Printers Pvt Ltd., No. 16/1,
3rd Cross, 2nd Main Road, Kasturiba Nagar
Bengaluru-560 026
Editor : Dr. M.S. Ashadevi